ಕುರ್‌ಆನ್ ಮತ್ತು ಪ್ರವಾದಿ ಚರ್ಯೆಯ ತತ್ವಾದರ್ಶಗಳನ್ನು ಸಾರುವ

# ಪವಿತ್ರ ಸಂದೇಶ

ಕನ್ನಡ ಪಾಕ್ಷಿಕ

| ಚಂದಾದರ ವಿವರ | | |
|---|---|---|
| ದೇಶ | | |
| ವಾರ್ಷಿಕ | ₹ | 250-00 |
| ಅರ್ಧ ವಾರ್ಷಿಕ | ₹ | 150-00 |
| ಬಿಡಿ ಪ್ರತಿ | ₹ | 10-00 |
| ಗಲ್ಫ್ ರಾಷ್ಟ್ರಗಳಿಗೆ | | |
| ವಾರ್ಷಿಕ | ₹ | 2,000-00 |
| ಅರ್ಧ ವಾರ್ಷಿಕ | ₹ | 1,000-00 |

❖ ಸಂಪುಟ: 19 ❖ ಸಂಚಿಕೆ: 20 ❖ ಪುಟ: 12 ❖ ಅಕ್ಟೋಬರ್ 16-31, 2015 ❖ ಬೆಲೆ: ₹ 10 http://www.salafimangalore.org

## ಹಿಜ್ರಾ ವರ್ಷದ ಐತಿಹಾಸಿಕ ಹಿನ್ನೆಲೆ

**"ಇನ್ನು ಒಂದು ಕ್ಷಣವೂ ನಿಲ್ಲಲಾಗದ ಸಂಧಿಗ್ದ ಸ್ಥಿತಿಯಲ್ಲಿ ಮದೀನಾಕ್ಕೆ ಹಿಜ್ರಾ ಹೋಗಲು ಸತ್ಯವಿಶ್ವಾಸಿಗಳಿಗೆ ಅನುಮತಿ ಸಿಕ್ಕಿತು. ತುಂಬಿದ ಕಣ್ಣುಗಳೊಂದಿಗೆ ಅವರು ಹುಟ್ಟಿ ಬೆಳೆದ ನಾಡಿಗೆ ವಿದಾಯ ಹೇಳಿದರು. ಹೃದಯ ಒಡೆಯುವಂತಹ ಸನ್ನಿವೇಶ. ಕೆಲವರು ಮಕ್ಕಳನ್ನು ತ್ಯಜಿಸಿದರು. ಕೆಲವರು ಮಾತಾಪಿತರನ್ನು ಬಿಟ್ಟು ಹೋದರು. ಕುಟುಂಬದವರನ್ನೂ ಸಂಪತ್ತನ್ನೂ ತೊರೆದು ಸತ್ಯದ ಸಂರಕ್ಷಣೆಗಾಗಿ ಅವರು ಸತ್ಯದ ಹಾದಿಯಲ್ಲಿ ಸಂಚರಿಸಿದರು".**

ಇಸ್ಲಾಮಿ ಜಗತ್ತು ಒಂದು ಹೊಸ ವರ್ಷಕ್ಕೆ ಸ್ವಾಗತ ಕೋರುತ್ತಿದೆ. ಹಳೆಯ ಕ್ಯಾಲೆಂಡರನ್ನು ಬದಲಿಸಿ ಹೊಸತನ್ನು ತಗಲಿಸುವಾಗ ಬಹಳಷ್ಟು ವಿಷಯಗಳನ್ನು ಚಿಂತಿಸಬೇಕಾಗಿದೆ. ನಮ್ಮನ್ನು ಅಗಲಿ ದೂರವಾದ ದಿನಗಳನ್ನು ನಾವು ಕ್ರಿಯಾತ್ಮಕವಾದ ಮಾರ್ಗಗಳಲ್ಲಿ ವ್ಯಯಿಸಿದ್ದೇವೆಯೇ? ನಾಳೆಗಾಗಿ ನಾವು ಏನನ್ನು ಗಳಿಸಿದ್ದೇವೆ? ಹೀಗೆ ಹಲವಾರು ಪ್ರಶ್ನೆಗಳನ್ನು ಹೊಸ ವರ್ಷವು ನಮ್ಮೊಡನೆ ಕೇಳುತ್ತಿದೆ.

ಇಸ್ಲಾಮೀ ಕ್ಯಾಲೆಂಡರ್ ಅಸ್ತಿತ್ವಕ್ಕೆ ಬಂದದ್ದು ಯಾರದಾದರೂ ಜನನ ಅಥವಾ ಮರಣದ ಆಧಾರದಲ್ಲಿ ಅಲ್ಲ. ಇಸ್ಲಾಮೀ ಇತಿಹಾಸದ ಅತಿ ಪ್ರಧಾನವಾದ ಒಂದು ಘಟನೆಯೊಂದಿಗೆ ಇಸ್ಲಾಮೀ ವರ್ಷ ಆರಂಭವಾಗುತ್ತದೆ. ಅದುವೇ ಪ್ರವಾದಿ ಮುಹಮ್ಮದ್(ಸ)ರು ಮಕ್ಕಾದಿಂದ ಮದೀನಾಕ್ಕೆ ವಲಸೆ ಹೋದ ಘಟನೆ. ಅದನ್ನು ಹಿಜ್ರಾ ವರ್ಷ ಎನ್ನಲಾಗುತ್ತದೆ.

### ಧ್ವಂಸಗೊಂಡ ಶತ್ರುಗಳ ನಿರೀಕ್ಷೆ:

ಏಕೈಕನಾದ ಪ್ರಭುವನ್ನು ಮಾತ್ರ ಆರಾಧಿಸಬೇಕು. ಅವನಲ್ಲಿ ಮಾತ್ರ ನಿರೀಕ್ಷೆಯಿರಿಸಬೇಕು. ಅವನಲ್ಲಿ ಮಾತ್ರ ಭರವಸೆಯಿಡಬೇಕು. ಅವನಲ್ಲಿ ಮಾತ್ರವೇ ಪ್ರಾರ್ಥನೆ, ಸಹಾಯಾರ್ಥನೆ ಮಾಡಬೇಕು. ಅವನಿಗೆ ಮಾತ್ರವೇ ಹರಕೆ, ಬಲಿ ಅರ್ಪಿಸಬೇಕು. ಪ್ರಪಂಚದ ಸೃಷ್ಟಿಕರ್ತನು ಅವನೇ. ಅವನಿಗೆ ಸಮಾನರಾಗಿ ಬೇರಾರೂ ಇಲ್ಲ ಎಂಬ ಸತ್ಯವನ್ನು ತೆರೆದು ಹೇಳಿದಾಗ ಬಹುದೇವಾರಾಧಕರಿಗೆ ಅದನ್ನು ಸಹಿಸಲಾಗಲಿಲ್ಲ.

ನಮಗೆ ಮುಹಮ್ಮದರಲ್ಲಿ ಬಹಳಷ್ಟು ನಿರೀಕ್ಷೆಗಳಿವೆ ಎಂದು ಅವರು ಮುಂಚೆ ಹೇಳುತ್ತಿದ್ದರು. ಸತ್ಯವನ್ನು ಆಲಿಸಿದಾಗ ಅವರ ನಿರೀಕ್ಷೆ ಭಗ್ನಗೊಂಡಂತೆ ಅವರಿಗೆ ತೋರಿತು. ಸತ್ಯವನ್ನು ಹಿಸುಕಿ ಕೊಲ್ಲಲು ಶೈತಾನನು ಅವರನ್ನು ನಿರಂತರ ಪ್ರೇರೇಪಿಸುತ್ತಾನೆ. ನೆಲೆ ತಪ್ಪಿದಂತಾದ ಅವರು ಸತ್ಯವಿಶ್ವಾಸಿಗಳನ್ನು ಸಿಕ್ಕ ಸಿಕ್ಕಲ್ಲಿ ಮರ್ದಿಸಲಾರಂಭಿಸಿದರು. ಅಲ್ಲಿಂದ ಮೊದಲ್ಗೊಂಡು ಸತ್ಯವಿಶ್ವಾಸಿಗಳಿಗೆ ಪೀಡನೆಗಳ ಪರ್ವವಾಗಿತ್ತು. ಕಠಿಣ ಪೀಡನೆಗಳು ಅವರ ವಿಶ್ವಾಸವನ್ನು ಮತ್ತಷ್ಟು ಶುಭ್ರಗೊಳಿಸಿತು. ಪೀಡನೆಗಳನ್ನು ಲೆಕ್ಕಿಸದೆ ಜನರು ಇಸ್ಲಾಮಿನೆಡೆಗೆ ಬರಲಾರಂಭಿಸಿದರು.

ಸ್ವಸ್ಥತೆಗಾಗಿ ಅಬಿಸೀನಿಯಾಕ್ಕೆ ಹೋಗಲು ಪ್ರವಾದಿ(ಸ)ರು ಅನುಯಾಯಿಗಳಿಗೆ ಅನುಮತಿ ನೀಡಿದರು. ಅಲ್ಲಿಯೂ ಅವರನ್ನು ನೆಮ್ಮದಿಯಿಂದಿರಲು ಬಿಡಲೊಲ್ಲೆವೆಂದು ಮುಶ್ರಿಕರು ಪ್ರತಿಜ್ಞೆಗೈದಿದ್ದರು. ಆದರೆ ಎಂತಹ ಸಂಧಿಗ್ಧ ಸ್ಥಿತಿಯನ್ನೂ ಎದುರಿಸುವಷ್ಟು ಪಕ್ವಗೊಂಡಿದ್ದ ಅವರ ಈಮಾನ್ ಅವರನ್ನು ಉನ್ನತಿಗೇರಿಸಿತ್ತು.

ದಿನಗಳುರುಳಿದವು. ಸತ್ಯವನ್ನು ಹೂತು ಹಾಕಲು ಮುಶ್ರಿಕರು ತಂತ್ರ ಹೂಡಿದರು. ಸತ್ಯವಿಶ್ವಾಸಿಗಳನ್ನು ಸಮೂಲ ನಾಶ ಮಾಡಲು ಶತ್ರುಗಳು ಸನ್ನದ್ಧರಾದರು. ಅಲ್ಲಾಹನ ಸಹಾಯವೆಲ್ಲಿ ಎಂದು ಕೇಳುವಂತಹ ದಾರುಣ ಸ್ಥಿತಿಯುಂಟಾಯಿತು.

ಇನ್ನು ಒಂದು ಕ್ಷಣವೂ ನಿಲ್ಲಲಾಗದ ಸಂಧಿಗ್ಧ ಸ್ಥಿತಿಯಲ್ಲಿ ಮದೀನಾಕ್ಕೆ ಹಿಜ್ರಾ ಹೋಗಲು ಸತ್ಯವಿಶ್ವಾಸಿಗಳಿಗೆ ಅನುಮತಿ ಸಿಕ್ಕಿತು. ತುಂಬಿದ ಕಣ್ಣುಗಳೊಂದಿಗೆ ಅವರು ಹುಟ್ಟಿ ಬೆಳೆದ ನಾಡಿಗೆ ವಿದಾಯ ಹೇಳಿದರು. ಹೃದಯ ಒಡೆಯುವಂತಹ ಸನ್ನಿವೇಶ. ಕೆಲವರು ಮಕ್ಕಳನ್ನು ತ್ಯಜಿಸಿದರು. ಕೆಲವರು ಮಾತಾಪಿತರನ್ನು ಬಿಟ್ಟು ಹೋದರು. ಕುಟುಂಬದವರನ್ನೂ ಸಂಪತ್ತನ್ನೂ ತೊರೆದು ಸತ್ಯದ ಸಂರಕ್ಷಣೆಗಾಗಿ ಅವರು ಸತ್ಯದ ಹಾದಿಯಲ್ಲಿ ಸಂಚರಿಸಿದರು.

### ಲಾಭ ಗಳಿಸಿದವರು:

ರೋಮನರಾಗಿದ್ದ ಸುಹೈಬ್ ಇಸ್ಲಾಮಿನ ಬೆಳಕನ್ನು ಕಂಡರು. ಮಕ್ಕಾದಲ್ಲಿ ವ್ಯಾಪಾರ ಮಾಡಿ ಸಾಕಷ್ಟು ಸಂಪಾದಿಸಿದ್ದರು. ಅವರು ಕೂಡಾ ಹಿಜ್ರಾ ಹೋಗಲು ಸನ್ನದ್ಧರಾದರು. ಸತ್ಯವನ್ನು ಸಂರಕ್ಷಿಸಲು ದೇಶ ತ್ಯಾಗದ ಹೊರತು ಬೇರೆ ಮಾರ್ಗವಿರಲಿಲ್ಲ. ಇದು ಶತ್ರುಗಳಿಗೆ ಸಹಿಸಲಾಗಲಿಲ್ಲ. ಅವರು ಹೇಳಿದರು: "ಓ ಸುಹೈಬ್, ನೀನೊಬ್ಬ ನೀಚ ಗುಲಾಮನಾಗಿ ನಮ್ಮ ಬಳಿಗೆ ಬಂದಿದ್ದೆ. ಹಾಗೆ ನಿನ್ನ ಸಂಪತ್ತು ವೃದ್ಧಿಗೊಂಡು ಈ ಸ್ಥಿತಿಯಲ್ಲಾದೆ. ಈಗ ನೀನು ನಿನ್ನ ಸಂಪತ್ತಿನೊಂದಿಗೆ ಪರಾರಿಯಾಗಲು ನೋಡುತ್ತಿರುವೆ. ಅಲ್ಲಾಹನಾಣೆ ಅದು ಸಾಧ್ಯವಿಲ್ಲ".

ಸುಹೈಬ್(ರ) ಹೇಳುತ್ತಾರೆ: "ನನ್ನ ಸಂಪತ್ತನ್ನು ಪೂರ್ಣವಾಗಿ ಬಿಟ್ಟು ಹೋಗುವುದಾದರೆ ನನ್ನನ್ನು ನನ್ನ ದಾರಿಗೆ ಬಿಡುವಿರಾ?"

ಅವರು ಹೇಳಿದರು: "ಹಾಗಾದರೆ ಬಿಡುತ್ತೇವೆ"

ಸುಹೈಬ್(ರ) ಹೇಳಿದರು: "ಸರಿ, ಹಾಗಿದ್ದರೆ ನನ್ನ ಸಂಪತ್ತನ್ನೆಲ್ಲಾ ನಿಮಗೆ ಕೊಡುತ್ತೇನೆ". ಈ ವಿಷಯವನ್ನರಿತ ಪ್ರವಾದಿ(ಸ)ರು ಹೇಳಿದರು: "ಸುಹೈಬ್ ಹೇರಳ ಲಾಭ ಗಳಿಸಿದರು" ಅಲ್ಲಾಹು ಅದನ್ನು ದೃಢ ಪಡಿಸಿದನು.

"ನಿಶ್ಚಯವಾಗಿಯೂ ಸತ್ಯವಿಶ್ವಾಸಿಗಳಿಗೆ ಸ್ವರ್ಗವಿದೆ ಎಂಬುದರ ಬದಲಿಗೆ ಅಲ್ಲಾಹು ಅವರ ಶರೀರ ಹಾಗೂ ಸಂಪತ್ತುಗಳನ್ನು ಅವರಿಂದ ಖರೀದಿಸಿಕೊಂಡಿದ್ದಾನೆ" (ಕುರ್‌ಆನ್ 9:111).

ಶರೀರ ಹಾಗೂ ಸಂಪತ್ತುಗಳನ್ನು ನೀಡಿ ಸ್ವರ್ಗವನ್ನು ಖರೀದಿಸಿದವರೆಷ್ಟು! ಅಲ್ಲಾಹನ ಮಾರ್ಗದಲ್ಲಿ ಯಾವನನ್ನೂ ತ್ಯಜಿಸಲು ಸನ್ನದ್ಧರಾದರೆ ಅಲ್ಲಾಹನ ವತಿಯ ಅಪಾರ ಲಾಭ ಗಳಿಸಬಹುದಾಗಿದೆ. ಸಂಪತ್ತು, ಅಧಿಕಾರ, ಅಂತಸ್ತುಗಳು ಸತ್ಯದ ಮುಂದೆ ತಡೆಯಾಗಿ ನಿಲ್ಲಬಾರದು. ಸರ್ವಸ್ವವನ್ನೂ ಅಲ್ಲಾಹನ ಮಾಗದಲ್ಲಿ ಸಮರ್ಪಿಸಿ ಶಾಶ್ವತವಾದ ಸ್ವರ್ಗವನ್ನು ಪಡೆಯಲು ಪೈಪೋಟಿ ನಡೆಸಿದ ಸಹಾಬಿಗಳು ಮುಸ್ಲಿಮ್ ಸಮುದಾಯಕ್ಕೆ ಮಾದರಿಯಾಗಬೇಕು.

(6ನೇ ಪುಟಕ್ಕೆ)



ಸಂಪಾದಕೀಯ

بسم الله الرحمن الرحيم

الحمد لله رب العالمين والصلاة والسلام على نبينا محمد وآله وصحبه أجمعين أما بعد

# ಹಿಂಸಾತ್ಮಕ ಮೊಹರಮ್ ಆಚರಣೆಯನ್ನು ಸರಕಾರ ನಿಷೇಧಿಸಲಿ

ಧರ್ಮಗಳ ಹೆಸರಲ್ಲಿ ವಿವಿಧ ಸಮಾಜಗಳಲ್ಲಿ ಮೂಢನಂಬಿಕೆಗಳು ಆಳವಾಗಿ ಬೇರು ಬಿಟ್ಟಿದ್ದು ಅದರಿಂದಾಗಿ ನೂರಾರು ಕುಟುಂಬಗಳು ಧ್ವಂಸಗೊಂಡಿವೆ. ಅದೆಷ್ಟೋ ಮನೆಗಳು ನಾಶವಾಗಿವೆ. ನೆರೆಹೊರೆಯ ಬಾಂಧವ್ಯ, ತಂದೆ, ಮಕ್ಕಳು, ಸಹೋದರ, ಸಹೋದರಿಯರು, ಗಂಡ-ಹೆಂಡಿರು ಮತ್ತು ಜಾತಿ-ಜಾತಿಗಳು, ಕುಲ-ಗೋತ್ರಗಳ ನಡುವೆ ಬಿರುಕು ಬಿಟ್ಟಿದೆ. ಮಾಟ-ಮಂತ್ರಗಳೆಂಬ ಘೋರ ಮೂಢನಂಬಿಕೆಯಿಂದಾಗಿ ಮನುಷ್ಯತ್ವವೇ ನಶಿಸಿ ರಾಕ್ಷಸೀಯತೆ ಬೆಳೆಯುತ್ತಿದೆ. ತಾವು ನಂಬುವ ದೈವ ದೇವತೆಗಳ ತೃಪ್ತಿಗಾಗಿ, ಭೂಮಿಯಲ್ಲಿ ಹೂತಿಟ್ಟ ನಿಧಿಯ ಆಶೆಯಲ್ಲಿ, ತಮ್ಮ ಅಥವಾ ತಮ್ಮ ಪತ್ನಿಯರ ಖಾಯಿಲೆ ಶಮನಕ್ಕಾಗಿ ಸ್ವಂತ ಮಕ್ಕಳನ್ನೂ ಅನ್ಯರ ಮಕ್ಕಳನ್ನೂ ಅಪಹರಿಸಿ ಬಲಿಗೊಡುವ ಅದೆಷ್ಟೋ ಅಮಾನುಷ ಕೃತ್ಯಗಳು ದೇಶದೆಲ್ಲೆಡೆ ನಡೆಯುತ್ತಿವೆ. ಅದೇ ರೀತಿ ಮಂತ್ರವಾದಿಗಳ, ಜ್ಯೋತಿಷ್ಯರ ಮಾತನ್ನು ನಂಬಿ ಆತ್ಮಹತ್ಯೆ ಮಾಡಿಕೊಂಡವರಿದ್ದಾರೆ. ಜನರಲ್ಲಿ ಮೂಢನಂಬಿಕೆಗಳನ್ನು ಬೆಳೆಸಿ, ಜನರ ಹಣ, ಮಾನ, ಪ್ರಾಣಗಳನ್ನು ಹೀರಿ ಅಪಾರ ಸಂಪತ್ತಿನ ಒಡೆಯರಾದ ಸ್ವಾಮೀಜಿಗಳು, ಪೀಠಾಧೀಶರುಗಳು, ಜ್ಯೋತಿಷಿಗಳು, ಬಾಬಾಗಳು, ಬೀವಿಗಳು, ಮುಲ್ಲಾ-ಮುಸ್ಲಿಯಾರ್‌ಗಳು, ಸ್ವಯಂಘೋಷಿತ ಪವಾಡ ಪುರುಷರು ಮತ್ತು ಪುಣ್ಯ ಪುರುಷರು ದೈವಾಂಶ ಸಂಭೂತರಂತೆ ಮೆರೆಯುತ್ತಿದ್ದಾರೆ. ಇದರಿಂದ ಜನರು ನೈಜ ಧರ್ಮದಿಂದ ದೂರವಾಗಿ, ಸೃಷ್ಟಿಕರ್ತನನ್ನು ಆರಾಧಿಸುವ ಬದಲು ಸೃಷ್ಟಿಗಳನ್ನು ಆರಾಧಿಸುವ ಸೃಷ್ಟಿ ಪೂಜಕರಾಗಿ ಮಾರ್ಪಟ್ಟಿದ್ದಾರೆ.

ಈ ಅಮಾನುಷ ಮೌಢ್ಯದಿಂದ ಜನರನ್ನು ಪಾರು ಮಾಡುವ ಸದುದ್ದೇಶದಲ್ಲಿ ರಾಜ್ಯದ ಪ್ರಮುಖ ಸಾಹಿತಿಗಳು, ಚಿಂತಕರು ಮತ್ತು ಬುದ್ಧಿಜೀವಿಗಳು ಅಲ್ಲಲ್ಲಿ ಪ್ರತಿಭಟನೆ, ಧರಣಿ, ವಿಚಾರಗೋಷ್ಠಿಗಳನ್ನು ನಡೆಸಿ ಮೂಢನಂಬಿಕೆ ವಿರೋಧಿ ಕಾಯ್ದೆಯನ್ನು ಜಾರಿಗೆ ತರಬೇಕೆಂದು ರಾಜ್ಯ ಸರಕಾರದ ಮೇಲೆ ಒತ್ತಡ ಹೇರುತ್ತಿದ್ದಾರೆ. ಮೌಢ್ಯ ವಿರೋಧಿ ಹೋರಾಟಗಾರರು ತಂತಮ್ಮ ಧರ್ಮೀಯ ಸಮಾಜಗಳಲ್ಲಿ ರೂಢಿಯಲ್ಲಿರುವ ಮೂಢನಂಬಿಕೆಗಳನ್ನು ಮಾತ್ರ ಎತ್ತಿ ತೋರಿಸುತ್ತಾರೆ. ಮುಸ್ಲಿಮ್ ಸಮಾಜದಲ್ಲಿ ಚಾಲ್ತಿಯಲ್ಲಿರುವ ಮೂಢ ನಂಬಿಕೆಗಳ ಬಗ್ಗೆ ಚಕಾರವೆತ್ತುವುದಿಲ್ಲ. ಮುಸ್ಲಿಮ್ ಸಮಾಜದ ಗುತ್ತಿಗೆ ಹಿಡಿದಿರುವ ಮುಲ್ಲಾ-ಮುಸ್ಲಿಯಾರ್, ಬಾಬಾ, ಮಸ್ತಾನ್‌ಗಳೆಂಬ ಧರ್ಮ ದ್ರೋಹಿಗಳು ಮುಸ್ಲಿಮ್ ಸಮಾಜದಲ್ಲಿ ಹಲವಾರು ಮೂಢನಂಬಿಕೆಗಳನ್ನು ರೂಢಿಗೆ ತಂದು ಮುಗ್ಧ ಮುಸ್ಲಿಮರ ಹಣ, ಮಾನ, ಪ್ರಾಣ ಹೀರಿ, ದಿವ್ಯ ಪುರುಷರಂತೆ ಮೆರೆಯುತ್ತಿದ್ದಾರೆ. ಇದೇ ನವೆಂಬರ್ ತಿಂಗಳ ದಿನಾಂಕ 22, 23, 24ರಂದು ಮುಸ್ಲಿಮರೆಂದು ಹೇಳಿಕೊಳ್ಳುವ ಶಿಯಾ ಪಂಥೀಯರು ವರ್ಗ ಬ್ಲೇಡು, ಚೂರಿಗಳಿಂದ ತಮ್ಮದೇ ದೇಹಕ್ಕೆ ಇರಿದು ಗಾಯ ಮಾಡಿಕೊಂಡು ಸಾರ್ವಜನಿಕ ರಸ್ತೆಗಳಲ್ಲಿ ರಕ್ತದೋಕುಳಿ ಹರಿಸುತ್ತಾ ಮುಗಿಲು ಮುಟ್ಟುವ ಆಕ್ರಂದನದೊಂದಿಗೆ ಮೊಹರಮ್ ಮೆರವಣಿಗೆ ಹೋಗುತ್ತಾರೆ. ಇದು ಅಪ್ಪಟ ಮೂಢ ನಂಬಿಕೆಯಾಗಿದೆ. ಈ ಹಿಂಸಾತ್ಮಕ ಮೊಹರಮ್ ಆಚರಣೆಗೆ ಇಸ್ಲಾಮ್ ಧರ್ಮದಲ್ಲಿ ಯಾವುದೇ ಆಧಾರವಿಲ್ಲ. ಇದು ಇವರೇ ರೂಢಿಸಿಕೊಂಡ ಮೌಢ್ಯಾಚರಣೆಯಾಗಿದೆ. ಮಾತ್ರವಲ್ಲ ಇದೇ ಮಂದಿ ಲೋಹದಿಂದ ತಯಾರಿಸಿದ ಕೈಯ ವಿಗ್ರಹವೊಂದನ್ನು ಪೆಟ್ಟಿಗೆಯೊಳಗಿಟ್ಟು ಆ ಪೆಟ್ಟಿಗೆಗೆ ಹಸಿರು ಬಟ್ಟೆ ಹೊದಿಸಿ ಅದಕ್ಕೆ ಹರಕೆ ಅರ್ಪಿಸಿ ವಿವಿಧ ಬೇಡಿಕೆಗಳನ್ನು ಮುಂದಿಟ್ಟು ಅದರೊಡನೆ ಪ್ರಾರ್ಥಿಸುತ್ತಾರೆ. ತಮ್ಮ ಬಯಕೆಗಳು ಈಡೇರುತ್ತವೆಯೆಂದು ನಂಬಿರುವ ಈ ಮಂದಿ ಆ ಹಸ್ತದ ವಿಗ್ರಹಕ್ಕೆ ದಿವ್ಯತ್ವ ಕಲ್ಪಿಸುತ್ತಾರೆ. ಇದು ವಿಗ್ರಹಾರಾಧನೆಯಾಗಿದೆ.

ಮುಸ್ಲಿಮರೆಂದು ಹೇಳಿಕೊಳ್ಳುವ ಇನ್ನೊಂದು ವರ್ಗದ "ಸುನ್ನಿ ಪಂಥ"ದವರು ಅನಾಮಧೇಯರ, ಅನ್ಯಮತೀಯರ, ಮೃಗ, ಪಕ್ಷಿ, ಜಂತುಗಳ ಸಮಾಧಿಗಳನ್ನು ಉಬ್ಬಿಸಿ ಅದಕ್ಕೆ ಕಬ್ಬಿಣದ ಗ್ರಿಲ್ಸ್‌ಗಳ ಆವರಣ ನಿರ್ಮಿಸಿ ಆ ಸಮಾಧಿಗಳಿಗೆ ಪುಣ್ಯ ಪುರುಷರ ದರ್ಗಾಗಳೆಂದು ಹೆಸರಿಟ್ಟು ಆ ದರ್ಗಾಗಳಿಗೆ ಹರಕೆಯಿಟ್ಟರೆ ರೋಗ ಶಮನವಾಗುತ್ತದೆ, ಬಂಜೆಯರಿಗೆ ಮಕ್ಕಳಾಗುತ್ತವೆ, ವ್ಯಾಪಾರದಲ್ಲಿ ಸಮೃದ್ಧಿಯುಂಟಾಗುತ್ತದೆ, ಅವಿವಾಹಿತ ಕನ್ಯೆಯರಿಗೆ ನೆಂಟಸ್ತಿಕೆಯುಂಟಾಗುತ್ತದೆ, ವಿದೇಶಕ್ಕೆ ವೀಸಾ ಸಿಗುತ್ತದೆ ಎಂದೆಲ್ಲಾ ಹೇಳಿ ಮುಗ್ಧ ಜನರಿಗೆ ಆಮಿಷ ತೋರಿಸಿ ಹರಕೆಯ ರೂಪದಲ್ಲಿ ಜನರನ್ನು ಕೊಳ್ಳೆ ಹೊಡೆಯಲಾಗುತ್ತಿದೆ.

ಸುಬ್ರಹ್ಮಣ್ಯ ಕ್ಷೇತ್ರದಲ್ಲಿ ಮಡೆಸ್ನಾನ ಪದ್ಧತಿ ಇರುವಂತೆ ಮುಸ್ಲಿಮ್ ಸಮಾಜದಲ್ಲಿ "ಮಡೆ ಸ್ವಾಹ" ಪದ್ಧತಿ ಚಾಲ್ತಿಯಲ್ಲಿದೆ. ಔಲಿಯಾ, ಮಸ್ತಾನ್, ಬೀವಿ, ಬಾಬಾ, ತಂಙಳ್‌ಗಳೆಂಬ ಕಪಟ ಪವಾಡ ಪುರುಷರ ದುರ್ವಾಸನೆ ಬೀರುವ ಬಾಯಿಂದ ಸುರಿಸಿದ ಜೊಲ್ಲು ರಸ ಮಿಶ್ರಿತ ನೀರನ್ನು ಪುಣ್ಯಕ್ಕಾಗಿ ಕುಡಿಯುವುದು, ವರ್ಷಗಟ್ಟಲೆ ಹಲ್ಲು ತೊಳೆಯದ ಬಾಬಾ, ಮಸ್ತಾನ್‌ಗಳು ಬಾಯಿಗಿಟ್ಟು ಅರ್ಧ ಕುಡಿದ ಚಹಾ ಕುಡಿಯುವುದು ಇವೆಲ್ಲಾ ಸುನ್ನೀ ಪಂಥೀಯರಲ್ಲಿ ಆಚರಣೆಯಲ್ಲಿರುವ ಮಡೆಸ್ವಾಹ ಸಂಪ್ರದಾಯವಾಗಿದೆ. ಇದೇ ರೀತಿಯ ಇನ್ನಷ್ಟು ಮೌಢ್ಯಾಚರಣೆಗಳು ಮುಸ್ಲಿಮ್ ಸಮಾಜದಲ್ಲಿದೆ.

ಆದ್ದರಿಂದ ಮೌಢ್ಯ ವಿರೋಧಿ ಕಾಯ್ದೆ ಜಾರಿಗಾಗಿ ಆಗ್ರಹಿಸುತ್ತಿರುವ ವಿಚಾರವಂತರು, ಬುದ್ಧಿಜೀವಿಗಳು ಮತ್ತು ಚಿಂತಕರು ಮುಸ್ಲಿಮ್ ಸಮಾಜದಲ್ಲಿ ರೂಢಿಯಲ್ಲಿರುವ ನಿಕೃಷ್ಟವಾದ ಮೂಢ ನಂಬಿಕೆಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾಗಿದೆ. ಈ ತಿಂಗಳ ಕೊನೆಯ ವಾರದಲ್ಲಿ ರಾಜ್ಯದ ಹಲವೆಡೆ ನಡೆಯಲಿರುವ ಹಿಂಸಾತ್ಮಕ ಮೊಹರಮ್ ಮೌಢ್ಯಾಚರಣೆಯನ್ನು ರಾಜ್ಯ ಸರಕಾರ ನಿಷೇಧಿಸಬೇಕು. ಅದೇ ರೀತಿ ಸಾರ್ವಜನಿಕ ರಸ್ತೆ ಬದಿಯಲ್ಲಿ ಕಟ್ಟಲ್ಪಟ್ಟಿರುವ ದರ್ಗಾಗಳನ್ನು ಸುಪ್ರೀಂ ಕೋರ್ಟ್‌ನ ಆದೇಶದನ್ವಯ ತೆರವುಗೊಳಿಸಿ ಸುಗಮ ರಸ್ತೆ ಸಂಚಾರಕ್ಕೆ ಅನುವು ಮಾಡಿ ಕೊಡಲು ಕೇಂದ್ರ ಹಾಗೂ ರಾಜ್ಯ ಸರಕಾರಗಳು ಮುಂದಾಗಬೇಕು.

(ಕಳೆದ ಸಂಚಿಕೆಯಿಂದ)

# ಮುಶ್ರಿಕರೊಂದಿಗೆ ಕುರ್‌ಆನಿನ ಭೋಧನಾ ಶೈಲಿ

هَلْ مِنْ خَالِقٍ غَيْرُ اللَّهِ يَرْزُقُكُم مِّنَ السَّمَاءِ وَالْأَرْضِ (فاطر : 3)

"ಅಲ್ಲಾಹನ ಹೊರತು ನಿಮಗೆ ಆಕಾಶದಿಂದಲೂ ಭೂಮಿಯಿಂದಲೂ ಜೀವನಾಧಾರ ನೀಡುವ (ಬೇರೆ) ಸೃಷ್ಟಿಕರ್ತರು ಯಾರಾದರೂ ಇದ್ದಾರೆಯೇ?" (ಕುರ್‌ಆನ್ 35:3).

أَفَمَن يَخْلُقُ كَمَن لَّا يَخْلُقُ (النحل : 17)

"ಸೃಷ್ಟಿಸುವವನು(ಏನನ್ನೂ) ಸೃಷ್ಟಿಸದವನಂತಾಗುವನೇ" (ಕುರ್‌ಆನ್ 16:17).

أَفِي اللَّهِ شَكٌّ فَاطِرِ السَّمَاوَاتِ وَالْأَرْضِ (ابراهيم : 10)

"ಭೂಮಿ, ಆಕಾಶಗಳನ್ನು ಸೃಷ್ಟಿಸಿದವನಾದ ಅಲ್ಲಾಹನ ವಿಷಯದಲ್ಲಿ ಸಂಶಯವೇನಾದರೂ ಇದೆಯೇ?" (ಕುರ್‌ಆನ್ 14:10).

فَأَرُونِي مَاذَا خَلَقَ الَّذِينَ مِن دُونِهِ (لقمان: 11)

"ಹಾಗಿದ್ದರೆ ಅವನ ಹೊರತಾದವರು ಏನನ್ನು ಸೃಷ್ಟಿಸಿದ್ದಾರೆಂಬುದನ್ನು ನೀವು ನನಗೆ ತೋರಿಸಿ ಕೊಡಿರಿ" (ಕುರ್‌ಆನ್ 31:11).

ಪವಿತ್ರ ಕುರ್‌ಆನ್ ಈ ರೀತಿಯಾಗಿ ಅವರೊಡನೆ ಪ್ರಶ್ನಿಸುತ್ತಿರುವುದು ಅವರಿಗೆ ಅಲ್ಲಾಹನ ಅಧಿಕಾರದ ಕುರಿತು ಅಥವಾ ಅಲ್ಲಾಹನೇ ಆ ಸೃಷ್ಟಿಕರ್ತ ಮತ್ತು ಸಂರಕ್ಷಕನೆಂಬುದರ ಕುರಿತು ಸಂಶಯವಾಗಲಿ, ವಿರೋಧಾಭಿಪ್ರಾಯವಾಗಲಿ ಇರುವುದರಿಂದಲ್ಲ, ಅವರಿಗೆ ಅವನೊಡನೆ ಸರ್ವ ರೀತಿಯ ದಾಸ್ಯತ್ವ ಹಾಗೂ ಋಣವಿದೆ ಮತ್ತು ಯಾವ ರೀತಿಯಲ್ಲಿ ನೋಡಿದರೂ ಅವರು ಅವನನ್ನೇ ಆಶ್ರಯಿಸಬೇಕಾಗಿದೆ ಎಂಬ ವಾಸ್ತವಿಕತೆಯನ್ನು ಅವರಿಗೆ ಚೆನ್ನಾಗಿ ಮನದಟ್ಟು ಮಾಡಿಕೊಡಲಿಕ್ಕಾಗಿದೆ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಸೃಷ್ಟಿ ಹಾಗೂ ಸಂರಕ್ಷಣೆಯಲ್ಲಿರುವ ಅಲ್ಲಾಹನ ಏಕತ್ವವನ್ನು ಅವರು ನಿಷೇಧಿಸಲಿಲ್ಲ. ಅವನ ಆ ಏಕತ್ವವನ್ನು ಒಪ್ಪಿಕೊಳ್ಳಬೇಕೆಂದು ಪ್ರವಾದಿ(ಸ)ರು ಅವರೊಡನೆ ಅಪೇಕ್ಷಿಸಿದ್ದೂ ಇಲ್ಲ. ಅವರನ್ನು ಮುಶ್ರಿಕರೆಂದು ಕರೆದದ್ದು ಅದಕ್ಕಾಗಿ ಅಲ್ಲವೆಂಬುದು ಸ್ಪಷ್ಟ. ಹಾಗಿದ್ದರೆ ಅವರು ಮಾಡಿದ ಶಿರ್ಕ್ ಯಾವುದಾಗಿತ್ತು? ಅಥವಾ ಅವರು ಅಲ್ಲಾಹನ ಏಕತ್ವದಲ್ಲಿ ಯಾವುದನ್ನು ನಿರಾಕರಿಸಿದ್ದರು? ಆರಾಧನೆಯಲ್ಲಿ ಅವರು ನೈಜ ದೇವನಾದ ಅಲ್ಲಾಹನೊಂದಿಗೆ ಬೇರೆ ಕೆಲವರನ್ನು ಭಾಗೀದಾರರನ್ನಾಗಿ ಮಾಡಿ ಆ ವಿಷಯಗಳಲ್ಲಿ ಅಲ್ಲಾಹನ ಏಕತ್ವವನ್ನು ನಿರಾಕರಿಸಿದ್ದರೆಂದು ವಿಶುದ್ಧ ಕುರ್‌ಆನ್ ಸ್ಪಷ್ಟ ಪಡಿಸುತ್ತದೆ.

قَالُوا أَجِئْتَنَا لِنَعْبُدَ اللَّهَ وَحْدَهُ وَنَذَرَ مَا كَانَ يَعْبُدُ آبَاؤُنَا (اعراف : 70)

"ನಾವು ಅಲ್ಲಾಹನನ್ನು ಮಾತ್ರವೇ ಆರಾಧಿಸಬೇಕು ಮತ್ತು ನಮ್ಮ ಪೂರ್ವಿಕರು ಆರಾಧಿಸುತ್ತಿದ್ದುದನ್ನು ಬಿಟ್ಟು ಬಿಡಬೇಕೆಂದು (ಹೇಳಲಿಕ್ಕಾಗಿ) ನೀನು ನಮ್ಮ ಬಳಿಗೆ ಬಂದಿರುವೆಯಾ?" ಎಂದು ಅವರು ಕೇಳಿದರು (ಕುರ್‌ಆನ್ 7:70).

## ಮುಶ್ರಿಕರು ನಿಷೇಧಿಸುವ ಏಕತ್ವ:

أَتَنْهَانَا أَن نَّعْبُدَ مَا يَعْبُدُ آبَاؤُنَا (هود: 62)

"ನಮ್ಮ ಪೂರ್ವಿಕರು ಪೂಜಿಸುತ್ತಿದ್ದವುಗಳನ್ನು ನಾವು ಪೂಜಿಸದಂತೆ ನಮ್ಮನ್ನು ನೀನು ತಡೆಯುವೆಯಾ?" (ಕುರ್‌ಆನ್ 11:62).

أَرَاغِبٌ أَنتَ عَنْ آلِهَتِي يَا إِبْرَاهِيمُ (مريم: 46)

"ಓ ಇಬ್ರಾಹೀಮ್, ನೀನು ನನ್ನ ಆರಾಧ್ಯರನ್ನು ಬಿಟ್ಟು ಬಿಡಲು ಇಚ್ಛಿಸುವೆಯಾ?" (ಕುರ್‌ಆನ್ 19:46).

قَالُوا يَا شُعَيْبُ أَصَلَاتُكَ تَأْمُرُكَ أَن نَّتْرُكَ مَا يَعْبُدُ آبَاؤُنَا (هود: 87)

"ಓ ಶುಐಬ್, ನಮ್ಮ ಪೂರ್ವಿಕರು ಪೂಜಿಸುತ್ತಿದ್ದುದನ್ನು ನಾವು ತ್ಯಜಿಸಬೇಕೆಂದು ನಿನ್ನ ನಮಾಝ್ ನಿನ್ನೊಂದಿಗೆ ಆಜ್ಞಾಪಿಸುತ್ತದೆಯೇ?" (ಕುರ್‌ಆನ್ 11:87).

# ಅತ್ತೌಹೀದ್ (ಏಕದೇವಾರಾಧನೆ)



مَا هَٰذَا إِلَّا رَجُلٌ يُرِيدُ أَن يَصُدَّكُمْ عَمَّا كَانَ يَعْبُدُ آبَاؤُكُمْ (سبا: 43)

"ಇವನು ನಿಮ್ಮನ್ನು ನಿಮ್ಮ ಪೂರ್ವಜರು ಪೂಜಿಸುತ್ತಿದ್ದುದರಿಂದ ದೂರೀಕರಿಸಲೆತ್ನಿಸುವ ಒಬ್ಬ ವ್ಯಕ್ತಿಯಲ್ಲದೆ(ಬೇರಾರೂ) ಅಲ್ಲ." (ಕುರ್‌ಆನ್ 34:43).

قَالُوا إِنْ أَنتُمْ إِلَّا بَشَرٌ مِّثْلُنَا تُرِيدُونَ أَن تَصُدُّونَا عَمَّا كَانَ يَعْبُدُ آبَاؤُنَا (ابراهيم: 10)

"ನೀವು ನಮ್ಮಂತಿರುವ ಮಾನವರೇ ವಿನಾ(ಬೇರಾರೂ) ಅಲ್ಲ. ನಮ್ಮ ಪೂರ್ವಿಕರು ಪೂಜಿಸುತ್ತಾ ಬಂದಿರುವವುಗಳಿಂದ ನಮ್ಮನ್ನು ನೀವು ದೂರೀಕರಿಸಲಿಚ್ಛಿಸುತ್ತಿದ್ದೀರಿ" ಎಂದು ಅವರು (ಸಂದೇಶವಾಹಕರೊಡನೆ) ಹೇಳಿದರು (ಕುರ್‌ಆನ್ 14:10).

قَالُوا أَجِئْتَنَا لِتَأْفِكَنَا عَنْ آلِهَتِنَا (أحقاف:22)

ಅವರು ಹೇಳಿದರು: "ನೀನು ನಮ್ಮನ್ನು ನಮ್ಮ ದೇವರುಗಳಿಂದ ತಿರುಗಿಸಿ ಬಿಡಲಿಕ್ಕಾಗಿ ನಮ್ಮ ಬಳಿಗೆ ಬಂದಿರುವೆಯಾ?" (ಕುರ್‌ಆನ್ 46:22).

وَمَا نَحْنُ بِتَارِكِي آلِهَتِنَا عَن قَوْلِكَ وَمَا نَحْنُ لَكَ بِمُؤْمِنِينَ (هود: 53)

"ನಿನ್ನ ಮಾತಿನಿಂದಾಗಿ ನಮ್ಮ ದೇವರನ್ನು ನಾವು ತ್ಯಜಿಸುವವರಲ್ಲ ಮತ್ತು ನಾವು ನಿನ್ನನ್ನು ನಂಬುವುದೂ ಇಲ್ಲ" (ಕುರ್‌ಆನ್ 11:53).

وَالَّذِينَ اتَّخَذُوا مِن دُونِهِ أَوْلِيَاءَ مَا نَعْبُدُهُمْ إِلَّا لِيُقَرِّبُونَا إِلَى اللَّهِ زُلْفَىٰ (الزمر : 3)

"ಅವನ ಹೊರತು(ಇತರರನ್ನು) ರಕ್ಷಕರಾಗಿ ಮಾಡಿಕೊಂಡವರು (ಹೇಳುವ ವಾದವೇನೆಂದರೆ) ಅವರು ನಮ್ಮನ್ನು ಅಲ್ಲಾಹನೆಡೆಗೆ ಹೆಚ್ಚು ನಿಕಟಗೊಳಿಸಲಿಕ್ಕಾಗಿ ವಿನಾ(ಬೇರಾವುದಕ್ಕೂ) ಅವರನ್ನು ನಾವು ಪೂಜಿಸುತ್ತಿಲ್ಲ (ಎಂದಾಗಿದೆ)" (ಕುರ್‌ಆನ್ 39:3).

وَيَعْبُدُونَ مِن دُونِ اللَّهِ مَا لَا يَضُرُّهُمْ وَلَا يَنفَعُهُمْ وَيَقُولُونَ هَٰؤُلَاءِ شُفَعَاؤُنَا عِندَ اللَّهِ قُلْ أَتُنَبِّئُونَ اللَّهَ بِمَا لَا يَعْلَمُ فِي السَّمَاوَاتِ وَلَا فِي الْأَرْضِ سُبْحَانَهُ وَتَعَالَىٰ عَمَّا يُشْرِكُونَ (يونس: 18)

"ಅವರು ಅಲ್ಲಾಹನ ಹೊರತು ತಮಗೆ ಹಾನಿಯನ್ನಾಗಲಿ, ಉಪಕಾರವನ್ನಾಗಲಿ ಮಾಡದಂತಹದನ್ನು ಆರಾಧಿಸುತ್ತಾರೆ ಮತ್ತು ಇವರು (ಆ ಆರಾಧ್ಯರು) ಅಲ್ಲಾಹನ ಬಳಿ ನಮ್ಮ ಶಿಫಾರಸುದಾರರಾಗಿದ್ದಾರೆ ಎಂದು ಹೇಳುತ್ತಾರೆ. ಹೇಳಿರಿ: ಭೂಮಿ, ಆಕಾಶಗಳಲ್ಲಿ ಅಲ್ಲಾಹನಿಗೆ ತಿಳಿದಿರದ ವಿಷಯದ ಕುರಿತು ಅವನಿಗೆ ನೀವು ತಿಳಿಸುತ್ತಿದ್ದೀರಾ? ಅವನು ಮಹಾ ಪರಿಶುದ್ಧನು. ಅವರು(ಅವನೊಂದಿಗೆ) ಮಾಡುತ್ತಿರುವ ಭಾಗೀದಾರರಿಗಿಂತ ಅವನು ಅತ್ಯುನ್ನತನಾಗಿದ್ದಾನೆ" (ಕುರ್‌ಆನ್ 10:18).

## ಆರಾಧನಾತ್ಮಕ ಏಕತ್ವದಲ್ಲಿ ಮುಶ್ರಿಕರ ಅಹಂಭಾವ:

ಮುಶ್ರಿಕರು ನಿಷೇಧಿಸುವ ಏಕತ್ವ ಯಾವುದೆಂದರೆ ಆರಾಧನೆಯಲ್ಲಿರುವ ಏಕತ್ವವನ್ನಾಗಿದೆಯೆಂದು ಮೇಲಿನ ಕುರ್‌ಆನ್ ವಚನಗಳಿಂದ ಸ್ಪಷ್ಟವಾಗುತ್ತದೆ. ಅಲ್ಲಾಹನೆಡೆಗೆ ಹತ್ತಿರವಾಗಲಿಕ್ಕಾಗಿ ಮತ್ತು ತಮ್ಮ ಕುರಿತು ಅಲ್ಲಾಹನ ಬಳಿ ಶಿಫಾರಸು ಮಾಡಲಿಕ್ಕಾಗಿ ಮಾತ್ರವೇ ಅವರು ಇತರ ಶಕ್ತಿ, ವ್ಯಕ್ತಿ, ವಸ್ತುಗಳನ್ನು ಆರಾಧಿಸುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಹಾಗಾಗಿ ಅವರು ಮುಶ್ರಿಕರೆಂದು ಕರೆಯಲ್ಪಡುತ್ತಾರೆ. ಹೀಗೆ ಕರೆಯಲ್ಪಟ್ಟದ್ದು ಅವರು ಆರಾಧನೆಯಲ್ಲಿರುವ ಅಲ್ಲಾಹನ ಏಕತ್ವವನ್ನು ನಿರಾಕರಿಸಿದ್ದರಿಂದಾಗಿದೆ ಎಂಬುದನ್ನು ಗಮನಿಸಬೇಕಾಗಿದೆ.

أَجَعَلَ الْآلِهَةَ إِلَٰهًا وَاحِدًا إِنَّ هَٰذَا لَشَيْءٌ عُجَابٌ (ص: 5)

"ಏನು! ಇವನು ಹಲವು ದೇವರುಗಳನ್ನು ಒಬ್ಬ ದೇವನಾಗಿ ಮಾಡಿದನೇ? ಇದೊಂದು ಅತ್ಯಾಶ್ಚರ್ಯಕರ ಸಂಗತಿಯಾಗಿದೆ" (ಕುರ್‌ಆನ್ 38:5).

إِنَّهُمْ كَانُوا إِذَا قِيلَ لَهُمْ لَا إِلَٰهَ إِلَّا اللَّهُ يَسْتَكْبِرُونَ (35) وَيَقُولُونَ أَئِنَّا لَتَارِكُوا آلِهَتِنَا لِشَاعِرٍ مَّجْنُونٍ (36) (الصافات)

"ಅಲ್ಲಾಹನ ಹೊರತು (ಬೇರೆ) ಯಾವ ಆರಾಧ್ಯನೂ ಇಲ್ಲ ಎಂದು ಅವರೊಡನೆ ಹೇಳಲಾದಾಗ ಅವರು ಅಹಂಭಾವ ತೋರಿಸುತ್ತಿದ್ದರು ಮತ್ತು ಒಬ್ಬ ಮತಿಭ್ರಾಂತ ಕವಿಗಾಗಿ ನಾವು ನಮ್ಮ ಪೂಜ್ಯರನ್ನು ತೊರೆಯಬೇಕೇ?" ಎಂದು ಹೇಳುತ್ತಿದ್ದರು (ಕುರ್‌ಆನ್ 37: 35, 36).

وَإِذَا ذَكَرْتَ رَبَّكَ فِي الْقُرْآنِ وَحْدَهُ وَلَّوْا عَلَىٰ أَدْبَارِهِمْ نُفُورًا (اسراء: 46)

"ನೀವು ಕುರ್‌ಆನಿನಲ್ಲಿ ನಿಮ್ಮ ಪ್ರಭುವನ್ನು ಮಾತ್ರ ಪ್ರಸ್ತಾಪಿಸುವಾಗ ಅವರು ದಿಗಿಲುಗೊಂಡು ಹಿಂದಕ್ಕೆ ತಿರುಗಿ ಹೋಗುವರು" (ಕುರ್‌ಆನ್ 17:46).

وَإِذَا ذُكِرَ اللَّهُ وَحْدَهُ اشْمَأَزَّتْ قُلُوبُ الَّذِينَ لَا يُؤْمِنُونَ بِالْآخِرَةِ وَإِذَا ذُكِرَ الَّذِينَ مِن دُونِهِ إِذَا هُمْ يَسْتَبْشِرُونَ (الزمر: 45)

"ಅಲ್ಲಾಹನ ಕುರಿತಾಗಿ ಮಾತ್ರ ಪ್ರಸ್ತಾಪಿಸಲ್ಪಟ್ಟರೆ ಪರಲೋಕದಲ್ಲಿ ವಿಶ್ವಾಸವಿಡದವರ ಹೃದಯಗಳು (ಅಸಹ್ಯದಿಂದ) ಮುದುಡುತ್ತವೆ ಮತ್ತು ಅವನ ಹೊರತಾದವರ (ಅಲ್ಲಾಹೇತರರ) ಕುರಿತಾಗಿ ಪ್ರಸ್ತಾಪಿಸಲ್ಪಟ್ಟರೆ ಆಗಲೇ ಅವರು (ಅತಿಯಾಗಿ) ಸಂತಸಗೊಳ್ಳುತ್ತಾರೆ" (ಕುರ್‌ಆನ್ 39:45).

ಮೇಲಿನ ಕುರ್‌ಆನ್ ಸೂಕ್ತಗಳಿಂದ ಸ್ಪಷ್ಟವಾಗುವುದೇನೆಂದರೆ ಬಹುದೇವಾರಾಧಕರ ಆಶ್ಚರ್ಯ, ಅಹಂಭಾವ, ಅವಿಶ್ವಾಸಗಳಿಗೆ ಮತ್ತು ಅವರ ರೋಷ, ದ್ವೇಷಗಳಿಗೆ ಏಕೈಕ ಕಾರಣ ಆರಾಧನಾತ್ಮಕ ಏಕತ್ವದೆಡೆಗೆ ಅವರನ್ನು ಆಹ್ವಾನಿಸುವುದಾಗಿದೆ. ಮುಶ್ರಿಕರು ನಿಷೇಧಿಸದ ಏಕತ್ವ ಮತ್ತು ಪ್ರವಾದಿಗಳು ಅವರನ್ನು ಯಾವುದರೆಡೆಗೆ ಆಹ್ವಾನಿಸಿದ್ದರೋ ಆ ಏಕತ್ವದ ನಡುವಿನ ಅಂತರ ಇದರಿಂದ ಚೆನ್ನಾಗಿ ಮನದಟ್ಟಾಗುತ್ತದೆ.

ಪ್ರವಾದಿಗಳು ಲೋಕದಲ್ಲಿ ನಿಯೋಗಿಸಲ್ಪಟ್ಟದ್ದು ಪ್ರಪಂಚದ ಸೃಷ್ಟಿಕರ್ತನೂ ಸಂರಕ್ಷಕನೂ ಅಲ್ಲಾಹನಾಗಿದ್ದಾನೆಂಬುದನ್ನು ಬೋಧಿಸಲಿಕ್ಕಾಗಿ ಮಾತ್ರವೇ ಅಲ್ಲ. ಬದಲಾಗಿ ಆರಾಧನೆ, ಪ್ರಾರ್ಥನೆ ಮತ್ತು ಸಹಾಯಾರ್ಥನೆಗಳು ಅಲ್ಲಾಹನಿಗೆ ಮಾತ್ರವೇ ಅಗತಕ್ಕದ್ದು ಎಂದು ಜನರಿಗೆ ಉಪದೇಶಿಸಲಿಕ್ಕೂ ಆ ತತ್ವವನ್ನು ಸಂಸ್ಥಾಪಿಸಲಿಕ್ಕೂ ಆಗಿತ್ತು. ಈ ವಾಸ್ತವಿಕತೆಯನ್ನು ಜನರು ಸಮ್ಮತಿಸಿದ್ದರೆಂಬುದು ಮೇಲೆ ಉಲ್ಲೇಖಿಸಿದ ಕುರ್‌ಆನಿನ ವಾಕ್ಯಗಳಿಂದ ತಿಳಿಯಲಾಗುತ್ತದೆ. ಆದರೆ ಜನರು ಅಲ್ಲಾಹನ ಆರಾಧನೆಯನ್ನು ನಿರಾಕರಿಸದಿದ್ದರೂ ಆರಾಧನೆ ಅಲ್ಲಾಹನಿಗೆ ಮಾತ್ರವೇ ಆಗಬೇಕು ಎಂಬ ಪ್ರವಾದಿಗಳ ಸಂದೇಶವನ್ನು ತಿರಸ್ಕರಿಸಿದರು. ಆದ್ದರಿಂದ ಆರಾಧನಾತ್ಮಕ ಏಕತ್ವದೆಡೆಗೆ ಅವರ ಗಮನ ಸೆಳೆಯಲಿಕ್ಕಾಗಿ ಮತ್ತು ಜನರನ್ನು ಆ ಪರಮ ಪ್ರಧಾನ ತತ್ವದೆಡೆಗೆ ಆಹ್ವಾನಿಸಲಿಕ್ಕಾಗಿ ಪ್ರವಾದಿಗಳು ಮತ್ತೆ ಮತ್ತೆ ಅವರಿಗೆ ಉಪದೇಶಿಸುವುದನ್ನು ಕುರ್‌ಆನಿನಲ್ಲಿ ಕಾಣಬಹುದಾಗಿದೆ. (ಮುಂದುವರಿಯುವುದು)

ಧರ್ಮನಿಷ್ಠ ಖಲೀಫರು

# ಇಸ್ಲಾಮಿನ ಎರಡನೇ ಖಲೀಫಾ ಉಮರುಬ್‌ನು ಖತ್ತಾಬ್

ಅಹ್ಮದ್ ಅನ್ಸಾರ್,
ಮಂಗಳೂರು

**ಖಲೀಫರ ಆಡಳಿತದ ಕಾರ್ಯಕ್ಷೇತ್ರ:**

ಖಲೀಫಾ ಉಮರ್(ರ)ರವರು ಯಶಸ್ವೀ ಇಸ್ಲಾಮೀ ಆಡಳಿತದ ಮಾದರಿ ಆಡಳಿತಗಾರರಾಗಿದ್ದರು. ಅವರ ಆದರ್ಶದ ಗುಣ ವಿಶೇಷಗಳು ಅವರ ಕಾಲದಲ್ಲೂ ಅವರ ಮರಣಾ ನಂತರವೂ ನೆಲೆ ನಿಂತಿತು. ಅದನ್ನೇ ಅಮೀರ್ ಅಲಿ ಹೇಳುತ್ತಾರೆ: "ಮೂವತ್ತು ವರ್ಷಗಳ ಪ್ರಜಾಪ್ರಭುತ್ವ ಕೊನೆಗೊಂಡಿತು". ಉಮರ್(ರ)ರವರು ಇಸ್ಲಾಮೀ ಖಿಲಾಫತ್‌ನ್ನು(ಇಸ್ಲಾಮೀ ದೇಶವನ್ನು) ವಿವಿಧ ಪ್ರಾಂತ್ಯಗಳಾಗಿ ವಿಂಗಡಿಸಿ ಪ್ರತಿಯೊಂದಕ್ಕೂ ರಾಜಧಾನಿಯನ್ನು ಗೊತ್ತುಪಡಿಸಿದರು. ಅವರು ವಿಂಗಡಿಸಿದ ಪ್ರಾಂತ್ಯಗಳು ಮತ್ತು ಅವುಗಳ ಗವರ್ನರ್‌ಗಳ ಹೆಸರುಗಳು ಈ ಕೆಳಗಿನಂತಿವೆ.

1. ಹಿಜಾಝ್ ಪ್ರಾಂತ್ಯ: ಮಕ್ಕಾ ಇದರ ರಾಜಧಾನಿಯಾಗಿತ್ತು. ನಾಫಿ ಬಿನ್ ಅಬೂ ಹಾರಿಸ್(ರ)ರವರು ಈ ಪ್ರಾಂತ್ಯದ ಗವರ್ನರ್ ಆಗಿದ್ದರು.
2. ಸಿರಿಯಾ ಪ್ರಾಂತ್ಯ: ಡಮಾಸ್ಕಸ್ ಇದರ ರಾಜಧಾನಿಯಾಗಿತ್ತು. ಮುಆವಿಯಾ ಬಿನ್ ಅಬೂ ಸುಫ್ಯಾನ್(ರ)ರವರು ಈ ಪ್ರಾಂತ್ಯದ ಗವರ್ನರ್ ಆಗಿದ್ದರು.
3. ಇರಾನ್ ಪ್ರಾಂತ್ಯ: ಬಸರಾ ಈ ಪ್ರಾಂತ್ಯದ ರಾಜಧಾನಿಯಾಗಿತ್ತು. ಅಬೂ ಮೂಸಾ ಅಶ್‌ಅರಿ(ರ)ರವರು ಇದರ ಗವರ್ನರ್ ಆಗಿದ್ದರು.
4. ಇರಾಕ್ ಪ್ರಾಂತ್ಯ: ಕೂಫಾ ಈ ಪ್ರಾಂತ್ಯದ ರಾಜಧಾನಿಯಾಗಿತ್ತು ಮತ್ತು ಮುಗೀರಾ ಬಿನ್ ಶುಬಾಹ್(ರ)ರವರು ಇದರ ಗವರ್ನರ್ ಆಗಿದ್ದರು.
5. ಈಜಿಪ್ಟ್: ಫುಸ್ತತ್ ಈ ಪ್ರಾಂತ್ಯದ ರಾಜಧಾನಿಯಾಗಿತ್ತು. ಅಮ್ರ್‌ಬ್‌ನುಲ್ ಆಸ್(ರ)ರವರು ಗವರ್ನರ್ ಆಗಿದ್ದರು.
6. ಫೆಲೆಸ್ತೀನ್: ಜೆರುಸಲೇಮ್ ಈ ಪ್ರಾಂತ್ಯದ ರಾಜಧಾನಿಯಾಗಿತ್ತು ಮತ್ತು ಅಲ್ ಖಮಾ ಬಿನ್ ಮಜಾಝ್(ರ)ರವರು ಇದರ ಗವರ್ನರ್ ಆಗಿದ್ದರು.
7. ಜಝೀರಾ (ಮೆಸಪೊಟಾಮಿಯಾ): ಹಿಮ್ಸ್ ಈ ಪ್ರಾಂತ್ಯದ ರಾಜಧಾನಿಯಾಗಿತ್ತು ಮತ್ತು ಉಮೈರ್‌ಬ್‌ನು ಸಅದ್(ರ)ರವರು ಇದರ ಗವರ್ನರ್ ಆಗಿದ್ದರು.
8. ಮಧ್ಯ ಅರಬಸ್ತಾನ: ಮದೀನಾ ಈ ಪ್ರಾಂತ್ಯದ ರಾಜಧಾನಿಯಾಗಿತ್ತು. ಮಾತ್ರವಲ್ಲ, ಮದೀನಾ ದೇಶದ ರಾಜಧಾನಿಯೂ ಆಗಿತ್ತು.

ಗವರ್ನರ್‌ಗಳಿಗೆ ಸೇನಾ ಕಮಾಂಡರ್ ಹುದ್ದೆಯಿರಲಿಲ್ಲ. ಸೇನೆಗೆ ಬೇರೆಯೇ ಕಮಾಂಡರ್‌ಗಳಿದ್ದರು. ಪ್ರತಿಯೊಂದು ಪ್ರಾಂತ್ಯಕ್ಕೂ ಗವರ್ನರ್‌ಗಳ ಹೊರತಾಗಿ ಬೇರೆ ಬೇರೆ ಇಲಾಖೆಗಳಿಗೆ ಬೇರೆ ಬೇರೆ ಅಧಿಕಾರಿಗಳಿದ್ದರು. ಖಜಾನಾಧಿಕಾರಿ (ಸಾಹಿಬ್-ಎ-ಬೈತುಲ್‌ಮಾಲ್) ಕಂದಾಯಾಧಿಕಾರಿ (ಸಾಹಿಬ್ ಎ. ಖಿರಜ್), ಮುಖ್ಯ ಪೊಲೀಸಧಿಕಾರಿ (ಸಾಹಿಬ್ ಎ. ಅಹ್ದತ್) ಮತ್ತು ಮುಖ್ಯ ನ್ಯಾಯಾಧೀಶ (ಅಲ್ ಖಾಝಿ), ಉದಾ: ಪ್ರಾರಂಭದಲ್ಲಿ ಅಮ್ಮಾರ್‌ಬ್‌ನು ಯಾಸೀರ್ ಕೂಫಾದ ಗವರ್ನರ್ ಆಗಿದ್ದರು. ಉಸ್ಮಾನ್‌ಬ್‌ನು ಹನೀಫ್(ರ)ರವರು ಕಂದಾಯ ಅಧಿಕಾರಿಯಾಗಿದ್ದರು. ಅಬ್ದುಲ್ಲಾಹಿಬ್‌ನು ಮಸೂದ್(ರ)ರವರು ಖಜಾನಾಧಿಕಾರಿಯಾಗಿದ್ದರು. ಹಜ್ರತ್ ಶುರೈಹ್(ರ)ರವರು ನ್ಯಾಯಾಧೀಶರಾಗಿದ್ದರು ಮತ್ತು ಅಬ್ದುಲ್ಲಾ ಹಿಬ್‌ನು ಖಾಝಿ(ರ) ರಕ್ಷಣಾ ಕಾರ್ಯದರ್ಶಿಯಾಗಿದ್ದರು. ಈ ಅಧಿಕಾರಿಗಳನ್ನು ಶೂರಾ ಕಮಿಟಿಯಲ್ಲಿ ಸಮಾಲೋಚಿಸಿ ನೇಮಕ ಮಾಡಲಾಗುತ್ತಿತ್ತು.




**ಜಿಲ್ಲಾವಾರು ವಿಂಗಡನೆ:**

ಪ್ರಾಂತ್ಯಗಳನ್ನು ಜಿಲ್ಲೆಗಳಾಗಿ ವಿಂಗಡಿಸಿ ಆ ಜಿಲ್ಲೆಗಳಿಗೆ ಜಿಲ್ಲಾಧಿಕಾರಿಗಳನ್ನು ನೇಮಕಗೊಳಿಸಲಾಗುತ್ತಿತ್ತು. ಈ ಎಲ್ಲಾ ಗವರ್ನರ್‌ಗಳನ್ನು ಮತ್ತು ಅಧಿಕಾರಿಗಳನ್ನು ಹಜ್ಜ್‌ನ ಸಂದರ್ಭಗಳಲ್ಲಿ ಕರೆಸಿ ಜನರ ಅಹವಾಲುಗಳನ್ನು ಸ್ವೀಕರಿಸಿ ಖಲೀಫರ ಮೂಲಕ ಪರಿಹರಿಸುವ ವ್ಯವಸ್ಥೆ ಮಾಡಲಾಗುತ್ತಿತ್ತು. ಅಧಿಕಾರಿಗಳು ಭ್ರಷ್ಟಾಚಾರ ಮುಕ್ತರಾಗಿರಲಿಕ್ಕಾಗಿ ಅವರಿಗೆ ಒಳ್ಳೆಯ ವೇತನ ನೀಡಲಾಗುತ್ತಿತ್ತು.

**ಖಲೀಫರು ಧಾರ್ಮಿಕ ಮುಖ್ಯಸ್ಥರಾಗಿದ್ದರು:**

ಖಲೀಫರು ದೇಶದ ಆಡಳಿತಗಾರರು ಮಾತ್ರವಲ್ಲ, ಧಾರ್ಮಿಕ ಮುಖ್ಯಸ್ಥರೂ ಆಗಿದ್ದರು. ಖಲೀಫಾ ಉಮರ್(ರ)ರವರು ಪ್ರವಾದಿ(ಸ)ರ ಮದೀನಾ ಮಸೀದಿಯಲ್ಲಿ ದಿನದ ಐದು ಹೊತ್ತಿನ ನಮಾಝ್, ಜುಮುಅ ನಮಾ ಝ್ ಮತ್ತು ಈದ್ ನಮಾಝ್‌ಗಳಿಗೆ ನೇತೃತ್ವ ನೀಡಿ ಖುತುಬಾ ನಿರ್ವಹಿಸುತ್ತಿದ್ದರು. ಅದೇ ರೀತಿ ಹಜ್ಜ್‌ನ ಸಂದರ್ಭಗಳಲ್ಲಿ ಅದರ ನೇತೃತ್ವ ವಹಿಸುತ್ತಿದ್ದರು. ಕೆಲವೊಮ್ಮೆ ಅವರ ಗೈರು ಹಾಜರಿಯಲ್ಲಿ ಅವರ ಪ್ರತಿನಿಧಿಗಳು ಆ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದರು. ಶರೀಅತ್‌ನ ಆಧಾರದಲ್ಲೇ ಸಮಸ್ಯೆಗಳನ್ನು ಪರಿಹರಿಸಲಾಗುತ್ತಿತ್ತು. ಜಟಿಲ ಸಮಸ್ಯೆಗಳ ಪರಿಹಾರಕ್ಕಾಗಿ ನ್ಯಾಯ ಶಾಸ್ತ್ರಜ್ಞರ ಸಮಿತಿ (ಶುಬಾ-ಎ-ಇಫ್ತಾ) ಯೊಂದಿಗೆ ಸಮಾಲೋಚನೆ ಮಾಡಲಾಗುತ್ತಿತ್ತು ಅಥವಾ ಸಮಸ್ಯೆಯನ್ನು ನೇರವಾಗಿ ಆ ಸಮಿತಿಗೆ ಕಳುಹಿಸಿ ಕೊಡಲಾಗುತ್ತಿತ್ತು. ಹಜ್ರತ್ ಅಲಿ, ಉಸ್ಮಾನ್, ಮುಆದ್‌ಬ್‌ನು ಜಬಲ್, ಅಬ್ದುಲ್ ರಹ್ಮಾನ್‌ಬ್‌ನು ಔಫ್, ಉಬಯ್ಯುಬ್‌ನು ಕಅ್‌ಬ್, ಝೈದ್‌ಬ್‌ನು ಸಾಬಿತ್, ಅಬೂ ಹುರೈರಾ ಮತ್ತು ಅಬೂ ದರ್ದಾ(ರ) ಮುಂತಾದವರು ಮದೀನಾದ ಮುಫ್ತಿ (ನ್ಯಾಯ ಶಾಸ್ತ್ರಜ್ಞರು)ಗಳಾಗಿದ್ದರು. ಖಲೀಫರು ತಮಗೆ ಅರಿವಿಲ್ಲದ ಹದೀಸ್‌ಗಳ ಕುರಿತು ಕೇಳಿ ತಿಳಿದುಕೊಳ್ಳಲು ಯಾವುದೇ ಹಿಂಜರಿಕೆ ತೋರಿಸುತ್ತಿರಲಿಲ್ಲ.

ಗವರ್ನರ್‌ಗಳು ಆಡಳಿತ ನಡೆಸುವುದರ ಜತೆಗೆ ಆಯಾ ಪ್ರಾಂತ್ಯದ ಧಾರ್ಮಿಕ ಮುಖ್ಯಸ್ಥರೂ ಆಗಿದ್ದರು. ಅವರು ತಮ್ಮ ಹತ್ತಿರದ ಮಸೀದಿಗಳಲ್ಲಿ ದೈನಂದಿನ ಐದು ಹೊತ್ತಿನ ನಮಾಝ್, ಜುಮುಅ ನಮಾಝ್ ಮತ್ತು ಈದ್ ನಮಾಝ್‌ಗಳಿಗೆ ನೇತೃತ್ವ ನೀಡುತ್ತಿದ್ದರು.

**ನ್ಯಾಯಾಂಗ:**

ನ್ಯಾಯಾಂಗದ ಕಾರ್ಯ ಚಟುವಟಿಕೆಗಳನ್ನು ಖಾಝಿಗಳು (ನ್ಯಾಯಾಧೀಶರು) ನಿರ್ವಹಿಸುತ್ತಿದ್ದರು. ಖಾಝಿಗಳು ಶಾಸಕಾಂಗದ ವ್ಯಾಪ್ತಿಯಿಂದ ಪೂರ್ಣವಾಗಿ ಮುಕ್ತರಾಗಿದ್ದರು. ಕೆಲವೊಂದು ಪ್ರಕರಣಗಳಲ್ಲಿ ಉಮರ್(ರ)ರವರು ಸ್ವತಃ ನ್ಯಾಯಾಧೀಶ(ಖಾಝಿ)ರ ಮುಂದೆ ವಿಚಾರಣೆಗಾಗಿ ಹಾಜರಾಗುತ್ತಿದ್ದರು. ಪ್ರಾಂತೀಯ ಖಾಝಿಗಳು ಪ್ರಾಂತೀಯ ಗವರ್ನರ್‌ಗಳ ಹಿಡಿತದಿಂದ ಸಂಪೂರ್ಣ ಸ್ವತಂತ್ರರಾಗಿದ್ದರು. ಲಂಚ, ಆಮಿಶಗಳಿಗೆ ಬಲಿಯಾಗದಿರಲಿಕ್ಕಾಗಿ ಖಾಝಿಗಳಿಗೆ ಒಳ್ಳೆಯ ವೇತನ ನೀಡಲಾಗುತ್ತಿತ್ತು. ಖಾಝಿಗಳಾದ ಹಜ್ರತ್ ಸಲ್ಮಾನ್, ರಬೀಅ ಮತ್ತು ಶುರೈಅ(ರ)ರವರಿಗೆ ಮಾಸಿಕ 500 ದಿರ್‌ಹಂ ವೇತನ ಸಿಗುತ್ತಿತ್ತು. ಹಜ್ರತ್ ಆಮಿರ್ ಮುಅವಿಯ್ಯಾ(ರ)ರಿಗೆ ಮಾಸಿಕ 1000 ದಿರ್‌ಹಂ ವೇತನ ಸಿಗುತ್ತಿತ್ತು. ಇತಿಹಾಸಕಾರ ಅಮೀರ್ ಅಲಿ ಹೇಳುತ್ತಾರೆ: "ಉಮರ್(ರ)ರವರು ನ್ಯಾಯಾಧೀಶರಿಗೆ ವೇತನ ನಿಗದಿ ಪಡಿಸಿದ ಮತ್ತು ಅವರಿಗೆ ಕಛೇರಿ ಮುಂತಾದ ಸೌಕರ್ಯಗಳನ್ನು ಒದಗಿಸಿದ ಮೊದಲ ಆಡಳಿತಗಾರರಾಗಿದ್ದಾರೆ". ಉಮರ್(ರ)ರವರು ಧಾರ್ಮಿಕ ವಿಧಿ ಮತ್ತು ವಿಶೇಷ ಕಾಯಿದೆಗಳ ತಬಾಖತುಲ್ ಫುಖಾಹ, ಮರ್ದಾರ್ದಿ ಮುಂತಾದ ಪುಸ್ತಕಗಳನ್ನು ಖಾಝಿಗಳಿಗೆ ಕಳುಹಿಸಿ ಕೊಟ್ಟಿದ್ದರು.

ಖಾಝಿಗಳು ತಮ್ಮ ತೀರ್ಮಾನಗಳಲ್ಲಿ ನ್ಯಾಯ ಪಾಲಿಸಲೇ ಬೇಕಾಗಿತ್ತು ಮತ್ತು ಉನ್ನತ ವ್ಯಕ್ತಿಗಳ ಪ್ರಭಾವಕ್ಕೆ ಮಾನ್ಯತೆ ಕೊಡದಂತೆ ನೋಡಿಕೊಳ್ಳಲಾಗುತ್ತಿತ್ತು. ಫಿರ್ಯಾದಿದಾರನಿಗೆ ತನ್ನ ಪ್ರಕರಣದಲ್ಲಿ ಸಾಕ್ಷ್ಯವನ್ನು ಮಂಡಿಸುವ ಮತ್ತು ಅಪರಾಧಿಗಳಿಗೆ ಸತ್ಯ ಪ್ರಮಾಣ ಮಾಡುವ ವ್ಯವಸ್ಥೆಯಿತ್ತು. ಒಂದುವೇಳೆ ಅನ್ಯಾಯವೆಸಗಿದವನ ಪರವಾಗಿ ನ್ಯಾಯ ತೀರ್ಮಾನವಾದರೆ ಅಥವಾ ನ್ಯಾಯ ಸಿಗಬೇಕಾದವನಿಗೆ ಅನ್ಯಾಯವಾದರೆ ಅಥವಾ ತೀರ್ಮಾನದ ಬಳಿಕ ಸತ್ಯಾಂಶ ಬೆಳಕಿಗೆ ಬಂದರೆ ಅಂತಹ ಪ್ರಕರಣವನ್ನು ಮರು ವಿಮರ್ಶೆ ಮಾಡಿ ತೀರ್ಪನ್ನು ಬದಲಾಯಿಸಲಾಗುತ್ತಿತ್ತು. ಯಾವುದಾದರೂ ಪ್ರಕರಣಗಳಲ್ಲಿ ಕುರ್‌ಆನಿನಿಂದಾಗಲಿ, ಸಹೀಹಾದ ಹದೀಸ್‌ಗಳಿಂದಾಗಲಿ ಮಾರ್ಗದರ್ಶನ ಸಿಗದಿದ್ದರೆ ಅಂತಹ ಪ್ರಕರಣಗಳ ಕುರಿತು ಸಮಾಲೋಚಿಸಲು ಶರೀಅತ್ ಮಂಡಳಿಗೆ ಕಳುಹಿಸಿ ಕೊಡಲಾಗುತ್ತಿತ್ತು. ಅವರು ಅದನ್ನು ಪೂರ್ವಿಕರ ತೀರ್ಮಾನಗಳ ಆಧಾರದಲ್ಲಿ ಇತ್ಯರ್ಥಗೊಳಿಸುತ್ತಿದ್ದರು.

ಖಲೀಫಾ ಉಮರ್(ರ)ರವರು ಖಾಝಿಗಳೊಂದಿಗೆ ಈ ರೀತಿ ಹೇಳುತ್ತಿದ್ದರು: "ನೀವು ಅಲ್ಲಾಹನ ಗ್ರಂಥವಾದ ಕುರ್‌ಆನಿನ ಆಧಾರದಲ್ಲಿ ಪ್ರಕರಣಗಳನ್ನು ಇತ್ಯರ್ಥಗೊಳಿಸಿರಿ. ಅದರಲ್ಲಿ ನಿಮಗೆ ಪರಿಹಾರ ಕಂಡು ಬರದಿದ್ದಲ್ಲಿ ಪ್ರವಾದಿ(ಸ)ರವರ ಸುನ್ನತ್‌ನ ಆಧಾರದಲ್ಲಿ ಬಗೆಹರಿಸಿರಿ. ಅದರಲ್ಲಿ ನಿಮಗೆ ಸ್ವಹೀ ಹದೀಸ್‌ಗಳು ಸಿಗದಿದ್ದಲ್ಲಿ ಪೂರ್ವಿಕರ ಅಭಿಪ್ರಾಯ (ಇಜ್ಮಾ)ಗಳನ್ನು ತೆಗೆದುಕೊಳ್ಳಿರಿ. ಅದರಲ್ಲೂ ನಿಮಗೆ ಪರಿಹಾರ ಕಾಣದಿದ್ದಲ್ಲಿ ಕುರ್‌ಆನ್ ಹಾಗೂ ಪ್ರವಾದಿ(ಸ)ರವರ ಸುನ್ನತ್‌ಗಳ ಆಧಾರದಲ್ಲಿ ನಿಮ್ಮ ಸ್ವಂತ ತೀರ್ಮಾನ ಕೈಗೊಳ್ಳಿರಿ. ಅದು ಇಜ್ತಿಹಾದ್ ಅಥವಾ ಖಿಯಾಸ್ ಆಗಿರುತ್ತದೆ".

ಉಮರ್(ರ)ರವರು ನೇಮಕಗೊಳಿಸಿದ ಖಾಝಿಗಳು(ನ್ಯಾಯಾಧೀಶರು) ದೇವಭಕ್ತರೂ ಸತ್ಯಸಂಧರೂ ವಿಶ್ವಸ್ಥರೂ ಆಗಿದ್ದರು. ಮಾತ್ರವಲ್ಲ, ಅವರು ಪ್ರಮುಖ (8ನೇ ಪುಟಕ್ಕೆ)

ಪುಸ್ತಕ ಪರಿಚಯ

# ಇದು ನಿಜಕ್ಕೂ 'ಸ್ವರ್ಗಪ್ರಾಪ್ತಿಗೆ ಸಹಕಾರಿ'

ಈ ಪ್ರಪಂಚದಲ್ಲಿ ಹುಟ್ಟಿದ ಪ್ರತಿಯೊಬ್ಬರೂ ಮೋಕ್ಷವನ್ನು ಬಯಸುವವರಾಗಿದ್ದಾರೆ. ಆಚಾರ ವಿಚಾರ, ಮತ ಧರ್ಮ ಗಳು ಬೇರೆ ಬೇರೆಯಾಗಿದ್ದರೂ ಕಟ್ಟಕಡೆಯದಾಗಿ ಎಲ್ಲರೂ ಬಯಸುವುದು ಮುಕ್ತಿಯನ್ನೇ.

ಇಸ್ಲಾಮ್ ಧರ್ಮದ ಪ್ರಕಾರ ಇಹಲೋಕದಲ್ಲಿ ಬದುಕು ವಷ್ಟು ಕಾಲ ಮಾನವನು ಸೃಷ್ಟಿಕರ್ತನ ಆಜ್ಞೆಯನ್ನು ಪಾಲಿಸುತ್ತಾ ಸಕಲ ಕೆಡುಕುಗಳಿಂದ ಮುಕ್ತನಾಗಿ ಬದುಕಿದರೆ ಅವನಿಗೆ ಪರ ಲೋಕದಲ್ಲಿ ಸ್ವರ್ಗ ನೀಡುವುದಾಗಿ ಅಲ್ಲಾಹು ವಾಗ್ದಾನವಿತ್ತಿ ದ್ದಾನೆ.

ನಮ್ಮ ಮೂಲ ವಿಶ್ವಾಸವನ್ನು ಸರಿಪಡಿಸಿಕೊಂಡ ಬಳಿಕ ಆ ವಿಶ್ವಾಸಕ್ಕನುಸಾರವಾದ ಕರ್ಮವನ್ನು ನಿರ್ವಹಿಸಬೇಕಾದುದು ಸ್ವರ್ಗ ಪ್ರಾಪ್ತಿಗೆ ಅನಿವಾರ್ಯವಾಗಿದೆ. ಈ ಹಿನ್ನೆಲೆಯಲ್ಲಿ ಪವಿತ್ರ ಕುರ್‌ಆನ್ ಮತ್ತು ಸಹೀಹ್ ಆದ ಹದೀಸ್‌ಗಳ ಗಟ್ಟಿಯಾದ ಚೌಕಟ್ಟಿನೊಳಗೆ ವಿವಿಧ ಸಂದರ್ಭಗಳಲ್ಲಿ ನಾವು ಪಾಲಿಸಬೇಕಾದ ಧಾರ್ಮಿಕ ನಿಯಮ ಮತ್ತು ದ್ಸಿಕ್ರ್ ದುಆಗಳನ್ನು ಪೋಣಿಸಿ ಹಿರಿಯ ವಿದ್ವಾಂಸ ಪ್ರೊ| ಪಿ. ಅಬ್ದುಲ್ಲ ಅವರಿಂದ ವಿರಚಿತಗೊಂಡು ಸಾಹಿತಿ ಇಸ್ಮಾಯಿಲ್ ಶಾಫಿ ಕನ್ನಡಕ್ಕೆ ಅನುವಾದಿ ಸಿರುವ "ಸ್ವರ್ಗ ಪ್ರಾಪ್ತಿಗೆ ಸಹಕಾರಿ" ಎಂಬ ಪುಸ್ತಕ ತುಂಬಾ ಉಪಯುಕ್ತವಾಗಿದೆ.

ಲೇಖಕರು ತಾವು ಆರಿಸಿಕೊಂಡಿರುವ ಸಾಂದರ್ಭಿಕ ದ್ಸಿಕ್ರ್ ದುಆಗಳಿಗೆ ಪ್ರಮಾಣಗಳನ್ನು ಉಲ್ಲೇಖಿಸುತ್ತಾ ನಿಜವಾಗಿಯೂ ವಿಶ್ವಾಸಿ ಗಳ ಪಾಲಿಗೆ "ಸ್ವರ್ಗ ಪ್ರಾಪ್ತಿಗೆ ಸಹಕಾರಿ" ಎನಿಸುವಂತಹ ಉತ್ತಮ ಪುಸ್ತಕ ವನ್ನೇ ಬರೆದಿರುವುದು ಪ್ರಶಂಸಾರ್ಹವೆನಿಸಿದೆ.

ಹಾಗೆ ನೋಡಿದರೆ ದ್ಸಿಕ್ರ್ ಪ್ರಾರ್ಥನೆಗಳನ್ನು ಸಾದರ ಪಡಿಸುವ ಹಲವಾರು ಪುಸ್ತಕಗಳು ಕನ್ನಡದಲ್ಲಿ ಲಭ್ಯವಿದ್ದು ಅವು ಗಳಲ್ಲಿ ಹೆಚ್ಚಿನವು ಖುಬೂರಿ ಪಂಡಿತರ ಸೃಷ್ಟಿಯಾಗಿವೆ. ಅಡಿ ಪಾಯವಿಲ್ಲದ ದ್ಸಿಕ್ರ್‌ಗಳು, ನಿರರ್ಥಕವೂ ನಿರಾಧಾರವೂ ಆದ ತಸ್‌ಬೀಹ್‌ಗಳು, ನಕಲಿ ಸ್ವಲಾತ್ ಗಳು... ಹೀಗೆ ಕುರ್‌ಆನ್ ಮತ್ತು ಸುನ್ನತ್‌ಗೆ ವಿರುದ್ಧವಾದ, ಮುಸಲ್ಮಾ ನನ ವಿಶ್ವಾಸಕ್ಕೆ ಕಂಟಕವಾಗಿರುವ ವಿಷಲಿಪ್ತ ಅಂಶಗಳೇ ಅವರ ಕೃತಿಗಳ ಮುಖ್ಯ ವಸ್ತುವಾಗಿದೆ.

ಖುಬೂರಿ ಪಂಡಿತರ ಕುಮ್ಮಕ್ಕಿನಿಂದ ಜನಸಾಮಾನ್ಯರು ಹಿಂದೆ ರೂಢಿಸಿಕೊಂಡಿದ್ದ ದಲಾಇಲುಲ್ ಖೈರಾತ್, ಶಾದ್ಸುಲಿ ಅವ್‌ರಾದ್, ಕಂಜುಲ್ ಅರ್ಶ್ ಮುಂತಾದ ನಕಲಿ ದ್ಸಿಕ್ರ್‌ಗಳು ಹಳ್ಳ ಹಿಡಿಯುತ್ತಿರು ವುದನ್ನು ಗಮನಿಸಿದ ಪುರೋಹಿತರು ಇದೀಗ ತಾವೇ ಸ್ವತಃ ರಚಿಸಿದ ನಕಲಿ ಸಲಾತ್‌ಗಳನ್ನೂ ಪ್ರಮಾಣ ವಿರುದ್ಧ ದ್ಸಿಕ್ರ್‌ಗಳನ್ನೂ ಸಂಗ್ರಹಿಸಿ ಪುಸ್ತಕ ರೂಪದಲ್ಲಿ ಪ್ರಕಟಿಸುತ್ತಿದ್ದಾರೆ.

ಪ್ರವಾದಿ(ಸ)ರವರನ್ನು ಕನಸಿನಲ್ಲಿ ಕಾಣಲೊಂದು ಸ್ವಲಾತ್. ಕಾಣೆಯಾದ ವಸ್ತು ದೊರಕಲು, ಗಂಡು ಮಗು ಹುಟ್ಟಲು... ಹೀಗೆ ಇಸ್ಲಾಮ್ ಕಂಡು ಕೇಳರಿಯದ ದ್ಸಿಕ್ರ್-ಸ್ವಲಾತ್‌ಗಳನ್ನು ಹುಟ್ಟು ಹಾಕಿ ಮುಗ್ಧ ಜನರ ವಿಶ್ವಾಸವನ್ನೂ ಹಣವನ್ನೂ ಲಪಟಾಯಿಸುತ್ತಿರುವ ಮುಸ್ಲಿ ಯಾರ್ ಪಡೆ ಇಸ್ಲಾಮ್ ಧರ್ಮದೊಳಗೆ ತುರುಕಿರುವ ಕಂದಾಚಾರಗಳಿಗೆ ಲೆಕ್ಕವಿಟ್ಟವರಿಲ್ಲ.

ಈ ಹಿನ್ನೆಲೆಯಲ್ಲಿ ಜನಸಾಮಾನ್ಯರನ್ನು ಲಕ್ಷ್ಯವಿಟ್ಟು ಕೊಂಡು ಮಾನವ ಹಸ್ತಕ್ಷೇಪವಿಲ್ಲದ ಸಂಶುದ್ಧ ಪ್ರಮಾಣಗಳ ಆಧಾರದಲ್ಲಿ ಪುಸ್ತಕ ವೊಂದು ಪ್ರಕಟಗೊಂಡು ಓದುಗರ ಕೈ ಸೇರುತ್ತಿರುವಾಗ ಇಷ್ಟೆಲ್ಲಾ ಪೀಠಿಕೆ ಬರೆಯಬೇಕೆನಿಸಿತು.

ಈ ಪುಸ್ತಕವು "ಕುರ್‌ಆನ್ ಮತ್ತು ಹದೀಸ್ ಆಧಾರಿತ" ಎಂಬ ಮುಖಪುಟ ಘೋಷಣೆಯನ್ನು ಕೊನೆಯ ತನಕ ಕಾಯ್ದುಕೊಂಡಿದೆ. ಲೇಖಕರಾಗಲೀ, ಅನುವಾದಕರಾಗಲೀ ತಮ್ಮ ಬಗೆಯಾಗಿ ಈ ಪುಸ್ತಕದಲ್ಲಿ ಏನನ್ನೂ ಸೇರ್ಪಡೆಗೊಳಿಸಿಲ್ಲ.

"ಕುರ್‌ಆನ್‌ನೊಂದಿಗೆ ಗಾಢ ಸಂಬಂಧ" ಎಂಬ ಅಧ್ಯಾಯ ದಿಂದ ಪ್ರಾರಂಭಗೊಂಡು ಮುಂದೆ ವಿವಿಧ ಸಂದರ್ಭಗಳಲ್ಲಿ ಹೇಳಬೇಕಾದ ದ್ಸಿಕ್ರ್-ತಸ್‌ಬೀಹ್ ಪ್ರಾರ್ಥನೆಗಳ ಒಂದು ಲೋಕವನ್ನೇ ಕೃತಿಯು ನಮ್ಮೆ ದುರು ತೆರೆದಿಡುತ್ತದೆ.

ವುದೂ, ನಮಾಝ್, ವ್ರತ, ವಿವಾಹ, ಝಕಾತ್, ಹಜ್ಜ್ ಹೀಗೆ ವಿಭಿನ್ನ ವಿಷಯಗಳನ್ನು ಸ್ಪರ್ಶಿಸುತ್ತಾ ಸಾಂದರ್ಭಿಕ ದ್ಸಿಕ್ರ್‌ಗಳೊಂದಿಗೆ ಅಲ್ಲಲ್ಲಿ ಫಿಕ್ಹ್ ನಿಯಮಗಳನ್ನು ವಿವರಿಸಿರುವುದು ಓದುಗರಿಗೆ ಉಪ ಯುಕ್ತವಾಗಿದ್ದು ಸಂಗ್ರಹಯೋಗ್ಯವೆನಿಸಿದೆ. "ಪವಿತ್ರ ಸಂದೇಶ"ದಲ್ಲಿ ಹಲವು ಕಂತುಗಳಾಗಿ ಮೂಡಿ ಬಂದ ಲೇಖನ ಮಾಲೆಯನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದ ಪ್ರಕಾಶಕರ ಸೇವೆಯೂ ಸ್ತುತ್ಯರ್ಹವಾಗಿದೆ.

ದ್ಸಿಕ್ರ್-ದುಆಗಳ ಬಗ್ಗೆ ಸಲಫಿ ಲೇಖಕರಿಂದ ಈ ಬಗೆಯ ಕೃತಿ ಪ್ರಕಟಗೊಂಡಿದ್ದರೂ ಈ ಪುಸ್ತಕದಲ್ಲಿ ಹತ್ತು ಹಲವು ವಿಷಯಗಳ ಮೇಲೆ ಲೇಖಕರು ಬೆಳಕು ಚೆಲ್ಲಿರುವುದು ಇಲ್ಲಿನ ವಿಶೇಷತೆಯಾಗಿದೆ.

ಹಾತ್ರಿ-ಹಗಲು ಹೇಳಬೇಕಾದ ಪ್ರಾರ್ಥನೆಗಳು, ಮಸೀದಿಗೆ ಸಂಬಂ ಧಿಸಿದ ಪ್ರಾರ್ಥನೆಗಳು, ವಿವಿಧ ಬಗೆಯ ನಮಾಝ್‌ಗಳ ವಿವರಣೆ, ವಿಪತ್ತು, ಸಾಲ ಮುಕ್ತಿಗಾಗಿ, ಇಸ್ಲಾಮಿನ ಅಭಿನಂದನೆಯ ರೂಪ, ರೋಗ, ಪ್ರಯಾಣ, ಸಭೆ-ಸಮಾರಂಭಗಳ ಶಿಷ್ಟಾಚಾರದ ಕುರಿತು ನಾವು ಪಾಲಿಸಬೇಕಾದ ಧಾರ್ಮಿಕ ವಿಧಿ-ನಿಯಮಗಳ ಸಂಕ್ಷಿಪ್ತ ಪರಿಚಯವೂ ಇಲ್ಲಿದೆ. ಸರಿಸುಮಾರು 200 ಪುಟಗಳನ್ನೂ ಇದಕ್ಕಾಗಿ ಮೀಸಲಿರಿಸಿದ್ದು ಕುರ್‌ಆನ್ ಇಲ್ಲವೇ ಸುನ್ನತ್‌ನ ಉಲ್ಲೇಖಗಳಲ್ಲದೆ "ಆ ವಿದ್ವಾಂಸರು ಹೀಗೆಂದಿದ್ದಾರೆ. ಈ ವಿದ್ವಾಂಸರ ಅಭಿಪ್ರಾಯ ಹಾಗಿದೆ" ಮುಂತಾದ ಯಾವುದೇ ಪಂಡಿತಾಭಿಪ್ರಾಯಗಳಿಗೆ ಆಸ್ಪದವಿಲ್ಲದಂತೆ ಮೂಡಿ ಬಂದಿರು ವುದು ಈ ಪುಸ್ತಕದ ವಿಶೇಷತೆಯಾಗಿದೆ.

ಮೂಲತಃ ಮಲಯಾಳಿಯಲ್ಲಿ ಪ್ರೊ| ಪಿ. ಅಬ್ದುಲ್ಲ ಅವರು ಬರೆದಿದ್ದ ಈ ಪುಸ್ತಕವನ್ನು ಹಿರಿಯ ಲೇಖಕ ಇಸ್ಮಾಯಿಲ್ ಶಾಫೀ ಸಾಹೇಬ್ ಸುಂದರವಾಗಿ ಕನ್ನಡಕ್ಕೆ ಅನುವಾದಿಸಿದ್ದಾರೆ.

ಸಲಫಿ ಸಭೆ-ಸಮಾರಂಭಗಳಲ್ಲಿ ಅಪ್ಪಟ ಕನ್ನಡದಲ್ಲಿ ಸ್ಫುಟ ವಾಗಿ ಕಾರ್ಯಕ್ರಮ ನಿರೂಪಿಸಬಲ್ಲ ಶಾಫೀ ಅವರ ಅಸ್ಖಲಿತ ಕನ್ನಡ ಉಚ್ಚಾ ರಣೆಯನ್ನು ಮೆಚ್ಚಿದವರಲ್ಲಿ ನಾನೂ ಒಬ್ಬ. ಬಹುಶಃ ಕನ್ನಡಿಗ ಮುಸ್ಲಿಮ್ ಭಾಷಣಗಾರರಲ್ಲಿ ಇವರಷ್ಟು ಸಲೀಸಾಗಿ ಮತ್ತು ಅಷ್ಟೇ ಸ್ಫುಟವಾಗಿ ವೇದಿಕೆಯ ಮೇಲೆ ಕನ್ನಡ ಮಾತನಾಡು ವವರು ಬಹು ವಿರಳ.

ಕವಿ ಹೃದಯದ ಸಾಹಿತಿಯೂ ಆಗಿರುವ ಇಸ್ಮಾಯೀಲ್ ಶಾಫೀ ಅವರ ಅನುವಾದವು ಕೃತಿಯ ಹಿರಿಮೆಗೆ ಗರಿ ಮೂಡಿಸಿ ದಂತಿದೆ.

ಕೊನೆಯದಾಗಿ ಇಲ್ಲಿ ಹೇಳಲೇಬೇಕಾದ ಒಂದು ಮಾತೆಂದರೆ ಅಲ್ಲಾಹನ ಗ್ರಂಥವಾದ ಪವಿತ್ರ ಕುರ್‌ಆನನ್ನು ಬಿಟ್ಟು ಉಳಿದ ಯಾವುದೇ ಗ್ರಂಥವಿರಲಿ, ಅದು ಎಷ್ಟೇ ದೊಡ್ಡ ವಿದ್ವಾಂಸರು ಬರೆದಿದ್ದರೂ ಅದರಲ್ಲಿ ಏನಾದರೂ ಲೋಪದೋಷ ಸಂಭವಿ ಸುವುದು ಮನುಷ್ಯ ಸಹಜವಾಗಿದೆ.

ಅದಕ್ಕೆ ಈ ಪುಸ್ತಕವೂ ಹೊರತಲ್ಲ ಎಂಬುದನ್ನು ನೆನಪಿ ಸುತ್ತಾ ಇದರಲ್ಲಿರುವ ಕೆಲವು ತಪ್ಪುಗಳನ್ನು ಓದುಗರು ತಿದ್ದಿಕೊಳ್ಳಬೇಕು ಎಂಬ ಸದುದ್ದೇಶದೊಂದಿಗೆ ಇಲ್ಲಿ ಕೊಡುತ್ತಿದ್ದೇನೆ.

ಕೃತಿಯ 12ನೇ ಪುಟದಲ್ಲಿ ಕುರ್‌ಆನ್ ಪಾರಾಯಣದ ಶಿಷ್ಟಾ ಚಾರ ತಿಳಿಸುವಲ್ಲಿ "ಆಯತ್‌ಗಳನ್ನು ಪಾರಾಯಣ ಮಾಡುವಾಗ ತಸ್‌ಬೀಹ್ ಹೇಳಬೇಕು" ಎಂದಾಗಿದೆ. ಇದು ಅಲ್ಲಾಹನ ಪರಿಶುದ್ಧತೆಯನ್ನು ಕೊಂಡಾ ಡುವ ಆಯತ್‌ಗಳನ್ನು "ಪಾರಾಯಣ ಮಾಡುವಾಗ" ಎಂದಾಗ ಬೇಕಿತ್ತು. ಇಲ್ಲಿ ಬಿಟ್ಟು ಹೋದ ಸಾಲು ಅರಬಿ ಮೂಲದಲ್ಲಿದ್ದರೂ ಸಾಮಾನ್ಯ ಓದುಗರಿಗೆ ಅದು ಅರ್ಥವಾಗಲಾರದು.

ಅದೇ ಅಧ್ಯಾಯದ 10ನೇ ಪುಟದಲ್ಲಿ ಕುರಾನ್ ಓದುವ ವಿಶ್ವಾಸಿ ಯನ್ನು "ಉತ್‌ರುಜ್ಜ್"ನಂತೆ ಎಂದು ಲಿಪ್ಯಂತರಿಸಲಾಗಿದೆ. ಇದು "ಕಿತ್ತಳೆ ಹಣ್ಣಿನಂತೆ" ಎಂದು ಭಾಷಾಂತರಿಸಿದ್ದರೆ ಎಲ್ಲರಿಗೂ ಅರ್ಥವಾಗುತ್ತಿತ್ತು.

ಹಾಗೆಯೇ ಅತ್ತಹಿಯ್ಯಾತ್, ಸೂರತ್, ಆಯತ್, ನಿಯ್ಯತ್, ಸುನ್ನತ್... ಮುಂತಾದ ಪದಗಳಿಗೆ ಅಡಿಒತ್ತು ಹಾಕುವ ಅಗತ್ಯವಿರಲಿಲ್ಲ.

ಇನ್ನು ಪುಟ 123ರ 29ನೇ ಅಧ್ಯಾಯದಲ್ಲಿ "ಆಹಾರ ಪಾನೀಯ ಗಳು" ಎಂಬ ತಲೆ ಬರಹದಡಿ "ಆಹಾರದ ಅನುಗ್ರಹವು ಅದಕ್ಕಿಂತ ಮೊದಲೂ ನಂತರವೂ ವುದೂ ಮಾಡುವುದರಲ್ಲಿದೆ (ಅಬೂದಾವೂದ್, ತಿರ್ಮುದ್ಸಿ) ಎಂಬ ಹದೀಸ್‌ನಲ್ಲಿರುವ ವುದೂ ಎಂಬ ಪದ ವ್ಯಾಖ್ಯಾನಿಸದೆ ಹಾಗೆಯೇ ಕೊಟ್ಟಿರುವುದು ಓದುಗರಲ್ಲಿ ತುಸು ಕಂಫ್ಯೂಸ್(ಗೊಂದಲ) ಉಂಟು ಮಾಡುವ ಸಾಧ್ಯತೆ ಇದೆ.

ಕಾರಣ "ವುದೂ" ಎಂಬ ಅರಬಿ ಪದಕ್ಕೆ ಎರಡು ಅರ್ಥವಿದೆ. ಒಂದು ನಮಾಝ್‌ಗಾಗಿ ಮಾಡುವ ಅಂಗಾಂಗ ಶುದ್ಧಿ. ಇದು ಅದರ ಸಾಂಕೇತಿಕ ಅರ್ಥ. ಇನ್ನೊಂದು ಬಾಹ್ಯಾರ್ಥ. ಇದರ ಪ್ರಕಾರ ತೊಳೆಯುವುದು ಅಥವಾ ಅರಬಿಯ "ಗಸ್ಲ್" ಎಂಬ ಅರ್ಥವನ್ನಷ್ಟೇ "ವುದೂ" ಹೊಂದಿದೆ. ಗಸ್ಲ್ ಎಂದರೆ ತೊಳೆಯುವುದು ಎಂದರ್ಥ.

ಪ್ರಸ್ತುತ ಹದೀಸ್‌ನಲ್ಲಿರುವ "ವುದೂ" ತೊಳೆಯುವುದು ಎಂಬ ರ್ಥಕ್ಕೆ ಸೀಮಿತವಾಗಿದೆ. ಸ್ವತಃ ಇಮಾಮ್ ತಿರ್ಮುದ್ಸಿ(ರ) ರವರ ಸುನನು ತುರ್ಮುದ್ಸಿ ಎಂಬ ಗ್ರಂಥದಲ್ಲಿ ಇದೇ ಹದೀಸನ್ನು ಅವರು "ಬಾಬು ಗಸ್‌ಲಿಲ್‌ಯದಿ ಕಬ್ಲತ್ತಆಮಿ" (ಭೋಜನಕ್ಕೆ ಮೊದಲು ಕೈ ತೊಳೆಯು ವುದು) ಎಂಬ ಅಧ್ಯಾಯದಲ್ಲಿ ಉಲ್ಲೇಖಿಸಿದ್ದಾರೆ.

ಸ್ವರ್ಗ ಪ್ರಾಪ್ತಿಗೆ ಸಹಕಾರಿ

(ಕುರ್‌ಆನ್-ಹದೀಸ್ ಆಧಾರಿತ)

ಪ್ರೊ. ಪಿ. ಅಬ್ದುಲ್ಲಾ

ಕನ್ನಡಕ್ಕೆ: ಇಸ್ಮಾಯೀಲ್ ಶಾಫಿ

ಪ್ರಕಾಶಕರು:

ಕರ್ನಾಟಕ ಸಲಫಿ ಫೌಂಡೇಶನ್

ದಮಾಮ್-ಖೋಬರ್ ಘಟಕ

(ಬಿರ್ರುಲ್ ವಾಲಿದೈನ್)

(ಸುನನು ತುರ್ಮುದಿ, ಹದೀಸ್ ನಂ. 375, ಪುಟ: 284).

ಆದುದರಿಂದ "ಆಹಾರದ ಅನುಗ್ರಹವು ಅದಕ್ಕಿಂತ ಮೊದಲೂ ನಂತರವೂ ಕೈ ತೊಳೆಯುವುದರಲ್ಲಿದೆ" ಎಂದು ಅನುವಾದಿಸಿದರೆ ಜನ ಸಾಮಾನ್ಯರಿಗೆ ಸುಲಭದಲ್ಲಿ ಗ್ರಾಹ್ಯವಾಗುತ್ತಿತ್ತು ಮತ್ತು ಇಲ್ಲಿನ ವುದೂ ವಿನ ಅರ್ಥ ಮನವರಿಕೆಯಾಗುತ್ತಿತ್ತು.

ಪುಟ 185ರಲ್ಲಿ ಮಯ್ಯಿತ್‌ಗೆ ಸ್ಥೈರ್ಯವನ್ನು ತುಂಬುವ ಪ್ರಾರ್ಥನೆಯ ಉಪಶೀರ್ಷಿಕೆ "ತಸ್‌ಬೀಯತ್" ಎಂದಾಗಿದೆ. ಅದು "ತಸ್ ಬೀತ್" ಎಂದಾಗಬೇಕಿತ್ತು. ಹಾಗೆಯೇ ಪುಟ 130 "ಅಭಿನಂದನೆ" ಎಂಬ ಅಧ್ಯಾಯದಲ್ಲಿ ಅನಸ್(ರ)ರವರಿಂದ ವರದಿಯಾದ ಒಂದು ಹದೀಸ್‌ನ ಭಾಷಾಂತರದಲ್ಲೂ ಸಣ್ಣದೊಂದು ಎಡವಟ್ಟಾಗಿದೆ. "ಸ್ನಾನ ಮಾಡುತ್ತಿದ್ದ ಮಕ್ಕಳ ಬಳಿಯಿಂದ ನಡೆದು ಹೋಗುತ್ತಿದ್ದ ಪ್ರವಾದಿ (ಸ)ರವರು ಅವರಿಗೆ ಸಲಾಮ್ ಹೇಳಿದರು (ಬುಖಾರಿ, ಮುಸ್ಲಿಮ್).

ಇಲ್ಲಿ "ಆಟವಾಡುತ್ತಿದ್ದ ಮಕ್ಕಳ ಬಳಿ ಯಿಂದಲೇ... ಎಂದಾಗ ಬೇಕಿತ್ತು. ಕಾರಣ ಮೂಲದಲ್ಲಿರುವುದು ಮರ್ರನ್ನಬಿಯ್ಯು(ಸ) ಅಲಾಸಿ ಬಿಯಾನಿನ್ "ಯಲ್‌ಅಬೂನ" ಎಂದು "ಯಲ್‌ಅಬೂನ" ಎಂದರೆ ಆಟ ಎಂದರ್ಥ. ಸ್ನಾನಕ್ಕೆ ಗುಸ್ಲ್ ಮತ್ತು ಇಗ್ತಿಸಾಲ್ ಎಂಬೆರಡು ಪದಗಳನ್ನು ಬಳಸಲಾಗುತ್ತದೆ.ಮೂಲತಃ ಮಲಯಾಳಿಯಲ್ಲಿರುವ "ಕಳಿಚ್ಚು ಕೊಂಡಿರುನ್ನ" ಎಂಬ ಭಾಗ ಅಚಾತುರ್ಯದಿಂದಲೋ ಏನೋ "ಕುಳಿಚ್ಚು ಕೊಂಡಿರುನ್ನ" ಎಂಬಂತೆ ಭಾಸವಾಗಿ ಪ್ರಮಾದವಶಾತ್ ಈ ತಪ್ಪು ಉಂಟಾ ಗಿರಬಹುದೆ ಎಂಬುದು ನನ್ನ ಊಹೆ.

198ನೇ ಪುಟದಲ್ಲಿ ಇಮಾಮ್ ತುರ್ಮುದ್ಸಿ ವರದಿ ಮಾಡಿರುವ ಪ್ರಾರ್ಥನೆ ಯೊಂದರ ವರದಿಗಾರರ ಹೆಸರು ಆವರಣದಲ್ಲಿ (ಮುಸ್ಲಿಮ್) ಎಂದು ತಪ್ಪಾಗಿ ಪ್ರಕಟಗೊಂಡಿದೆ.

ಅರಬಿ ಮೂಲದ ಹದೀಸ್ ಓದಿದರೆ ಅದರ ಆವರಣದಲ್ಲೇ ತುರ್ಮುದ್ಸಿಯ ಹೆಸರು ಕಾಣಬಹುದು.

ಪ್ರಮಾದವಶಾತ್ ನಡೆಯುವ ಇಂತಹ ತಪ್ಪುಗಳು ಮಾನವ ಸಹಜವಾದರೂ ಕೃತಿ ಪರಿಚಯದ ಮೂಲಕವೋ ಪುನರ್ ಮುದ್ರಣ ದಲ್ಲಿ ಪರಿಷ್ಕರಿಸುವ ಮೂಲಕವೋ ಅವುಗಳನ್ನು ತಿದ್ದಿಕೊಳ್ಳುವ ಅವಕಾಶ ನಮ್ಮೆದುರಿಗಿದೆ. ಜತೆಗೆ ಇದು ಮುಂದಿನ ಪ್ರಕಟಣೆಗಳಲ್ಲಿ ಹೆಚ್ಚು ಕಾಳಜಿ ಹಾಗೂ ಅತ್ಯಂತ ಶ್ರದ್ಧೆಯಿಂದ ಪುಸ್ತಕ ಹೊರ ತರಲು ಲೇಖಕರಿಗೆ ಅನುವು ಒದಗಿಸುವುದರಲ್ಲಿ ಸಂದೇಹವಿಲ್ಲ.

✍ ಎಂ.ಇ.ಎ.

ಅಕ್ಟೋಬರ್ 16-31, 2015 ಪವಿತ್ರ ಸಂದೇಶ 7

# ಹಿಜ್ರಾ ವರ್ಷದ ಐತಿಹಾಸಿಕ ಹಿನ್ನೆಲೆ

(1ನೇ ಪುಟದಿಂದ)

**ಯಾಕಾಗಿ ಹಿಜ್ರಾ:**

ಅಲ್ಲಾಹು ಮತ್ತು ಅವನ ರಸೂಲರೊಡನೆ ಯುದ್ಧ ಘೋಷಿಸಿದ ಶತ್ರುಗಳೊಂದಿಗೆ ರಾಜಿಯಾಗಲು ಸತ್ಯವಿಶ್ವಾಸಿಗಳು ಸನ್ನದ್ಧರಾಗಲಿಲ್ಲ. ತೌಹೀದ್‌ನ ಶತ್ರುಗಳು ಎಸೆದ ಭಿಕ್ಷಾ ವಸ್ತುಗಳನ್ನು ಹೆಕ್ಕಲು ಸತ್ಯವಿಶ್ವಾಸಿಗಳಿಗೆ ಸರ್ವಥಾ ಸಾಧ್ಯವಿಲ್ಲ. ವಿಶುದ್ಧ ಕುರ್‌ಆನಿನ ವಚನಗಳನ್ನು ನೋಡಿರಿ:

"ಅಲ್ಲಾಹನಲ್ಲೂ, ಅಂತ್ಯ ದಿನದಲ್ಲೂ ವಿಶ್ವಾಸವಿರುವ ಒಂದು ಜನತೆ ಅಲ್ಲಾಹು ಮತ್ತು ಅವನ ಸಂದೇಶವಾಹಕರೊಡನೆ ಅಸೂಯೆ ತೋರಿಸುವವರೊಂದಿಗೆ ಸಂಬಂಧ ಬೆಳೆಸುವುದನ್ನು ನೀವು ಕಾಣಲಾರಿರಿ. ಅವರು ತಮ್ಮ ತಂದೆ, ಪುತ್ರರು, ಸಹೋದರರು ಅಥವಾ ಆಪ್ತ ಕುಟುಂಬದವರಾಗಿದ್ದರೂ ಸರಿ. ಅಂತಹವರ ಹೃದಯಗಳಲ್ಲಿ ಅವನು(ಅಲ್ಲಾಹು) ಸತ್ಯವಿಶ್ವಾಸವನ್ನು ದಾಖಲಿಸಿಟ್ಟಿರುವನು ಮತ್ತು ಅವರನ್ನು ತನ್ನ ವತಿಯ ಒಂದು ರೂಹ್(ದಿವ್ಯ ಸಂದೇಶ)ನಿಂದ ಬಲ ಪಡಿಸಿರುವನು ಮತ್ತು ಅವರನ್ನು ಅವನು ತಳ ಭಾಗದಲ್ಲಿ ನದಿಗಳು ಪ್ರವಹಿಸುತ್ತಿರುವ ಸ್ವರ್ಗೋದ್ಯಾನಗಳಲ್ಲಿ ಪ್ರವೇಶಗೊಳಿಸುವನು. ಅದರಲ್ಲಿ (ಅವರು) ನಿತ್ಯವಾಸಿಗಳಾಗಿರುವರು. ಅವರ ಕುರಿತು ಅಲ್ಲಾಹು ತೃಪ್ತಿಗೊಂಡಿರುವನು ಮತ್ತು ಅವನ ಕುರಿತು ಅವರೂ ತೃಪ್ತಿಗೊಂಡಿರುವರು. ಅವರು ಅಲ್ಲಾಹನ ಪಕ್ಷದವರು. ಖಂಡಿತವಾಗಿಯೂ ಅಲ್ಲಾಹನ ಪಕ್ಷದವರೇ ವಿಜಯಿಗಳು" (ಕುರ್‌ಆನ್ 58:22).

**ನೆಮ್ಮದಿಯ ಆಶ್ವಾಸನೆ:**

ಪ್ರೀತಿಸುತ್ತಿದ್ದವರೆಲ್ಲಾ ದ್ವೇಷಿಸಿದರು. ಮುಗುಳ್ನಗುತ್ತಿದ್ದ ಮುಖಗಳು ಕೆಂಡದಂತಾಗಿ ಬದಲಾದವು. ಈ ರೀತಿಯ ಅಮಾನುಷ ವರ್ತನೆಗಳಿಂದ ಸತ್ಯವಿಶ್ವಾಸಿಗಳು ಮನನೊಂದರು. ನೋವು ಸಹಿಸಲಾಗಲಿಲ್ಲ. ಆದರೆ ಸತ್ಯದ ಉಳಿವಿಗೆ ಸಹಿಸಲೇಬೇಕು. ತೌಹೀದ್‌ನ ಸಂದೇಶವನ್ನು ಸ್ವೀಕರಿಸಿದ ಏಕೈಕ ಕಾರಣಕ್ಕಾಗಿ ಪೀಡನೆಗಳನ್ನು ಅನುಭವಿಸಬೇಕಾಗಿ ಬಂದ ಸತ್ಯವಿಶ್ವಾಸಿಗಳಿಗೆ ಲಭಿಸಿದ ನೆಮ್ಮದಿಯ ಆಶ್ವಾಸನೆಯನ್ನು ನೋಡಿರಿ:

"(ಪ್ರವಾದಿಯವರೇ, ನಾನು ಪ್ರಸ್ತಾಪಿಸಿದ್ದಾಗಿ ನನ್ನ ದಾಸರೊಡನೆ) ಹೇಳಿರಿ: ತಮ್ಮ ಮೇಲೆಯೇ ಅತಿಕ್ರಮಿಸಿಕೊಂಡಿರುವ ನನ್ನ ದಾಸರೇ, ನೀವು ಅಲ್ಲಾಹನ ಕೃಪೆಯ ಬಗ್ಗೆ ನಿರಾಶರಾಗಬೇಡಿರಿ. ನಿಶ್ಚಯವಾಗಿಯೂ ಅತೀ ಹೆಚ್ಚು ಕ್ಷಮಿಸುವವನೂ ವಿಶೇಷವಾಗಿ ದಯೆ ತೋರುವವನೂ ಅವನೇ. ನಿಮಗೆ ಯಾತನೆ ಎರಗುವುದಕ್ಕಿಂತ ಮುಂಚೆ ನಿಮ್ಮ ಪ್ರಭುವಿನ ಕಡೆಗೆ ಮರಳಿರಿ ಮತ್ತು ಅವನಿಗೆ ಶರಣಾಗತರಾಗಿರಿ. (ಅದು ಎರಗಿದರೆ) ಮತ್ತು ನಿಮಗೆ (ಎಲ್ಲಿಂದಲೂ ಯಾವುದೇ)ಸಹಾಯ ಲಭಿಸದು. ನಿಮ್ಮ ಪ್ರಭುವಿನ ವತಿಯಿಂದ ನಿಮಗೆ ಅವತೀರ್ಣಗೊಂಡಿರುವ ಈ ಅತ್ಯುತ್ತಮ ಸಂದೇಶವನ್ನು ಅನುಸರಿಸಿರಿ" (ಕುರ್‌ಆನ್ 39: 53-55).

**ಹುಟ್ಟಿ ಬೆಳೆದ ಮಣ್ಣಿಗೆ ವಿದಾಯ:**

ಪ್ರವಾದಿ(ಸ)ರು ತನ್ನ ತಾಯ್ನಾಡಾದ ಮಕ್ಕಾಕ್ಕೆ ಬೀಳ್ಕೊಡುತ್ತಾರೆ. ಜನಿಸಿದ ಮಣ್ಣು, ಬೆಳೆದ ನಾಡು, ಬಾಲ್ಯವನ್ನು ಕಳೆದ ಪರಿಸರಗಳು, ಆಡುಗಳನ್ನು ಮೇಯಿಸಿದ ಹುಲ್ಲುಗಾವಲುಗಳು ಎಲ್ಲವೂ ಇನ್ನು ಕನಸುಗಳು ಮಾತ್ರ. ಮನೋವೇದನೆಯಿಂದ ಮಕ್ಕಾವನ್ನು ದಿಟ್ಟಿಸಿ ನೋಡುತ್ತ ಪ್ರವಾದಿ(ಸ)ರು ಹೇಳಿದರು: "ಓ ಮಕ್ಕಾ, ನೀನು ಅಲ್ಲಾಹನ ಭೂಮಿಯಲ್ಲಿ ಅತೀ ಉತ್ತಮ ಸ್ಥಳವಾಗಿರುವೆಯೆಂದು ನನಗೆ ಗೊತ್ತಿದೆ. ಅಲ್ಲಾಹನಿಗೆ ಅತ್ಯಂತ ಪ್ರೀತಿಯ ಮಣ್ಣು ನೀನಾಗಿರುವೆ. ನಿನ್ನ ಜನರು ನನ್ನನ್ನು ಹೊರ ಹಾಕದಿರುತ್ತಿದ್ದರೆ ನಾನು ನಿನ್ನನ್ನು ಬಿಟ್ಟು ಹೋಗುತ್ತಿರಲಿಲ್ಲ".

ದುಃಖ-ದುಮ್ಮಾನಗಳು ಬೆರೆತ ಪ್ರವಾದಿ(ಸ)ರವರ ಮಾತುಗಳು ಮಕ್ಕಾದ ಮಣ್ಣಿನೊಂದಿಗೆ ಲೀನವಾದವು. ಸತ್ಯದ ಹಾದಿಯಲ್ಲಿ ಎಲ್ಲವನ್ನೂ ಸಹಿಸಬೇಕು. "ಲಾ ಇಲಾಹ ಇಲ್ಲಲ್ಲಾಹ್" ಎಂಬ ಪರಮ ಸತ್ಯವನ್ನು ಮುಚ್ಚಿಡುತ್ತಿದ್ದರೆ ಏನೇನೋ ಗಳಿಸಬಹುದಾಗಿತ್ತು. ದೇಶದ ಅಧಿಪತಿಯಾಗಬಹುದಾಗಿತ್ತು. ಅಪಾರ ಸಂಪತ್ತಿನ ಒಡೆಯನಾಗಬಹುದಾಗಿತ್ತು. ಹಾಗಿರುವಾಗ ಮದೀನಾದಲ್ಲಿ ಒಂದು ರಾಷ್ಟ್ರವನ್ನು ಸ್ಥಾಪಿಸಲು ಹೋಗಬೇಕೇ? ಉದ್ದೇಶ ಅದಾವುದೂ ಅಲ್ಲ. ಈ ತ್ಯಾಗ-ಪರಿಶ್ರಮಗಳೆಲ್ಲಾ ಅದಕ್ಕಾಗಿ ಆಗಿರಲಿಲ್ಲ. ಬದಲಾಗಿ ಈಮಾನಿನ ಸಬಲೀಕರಣದ ಮೂಲಕ ಉತ್ತಮ ಸಮುದಾಯವೊಂದರ ಸೃಷ್ಟಿಯಾಗಿತ್ತು ಉದ್ದೇಶ.

**ಸತ್ಯದ ಪ್ರವೇಶದ್ವಾರ:**

ಪ್ರವಾದಿ ಮುಹಮ್ಮದ್(ಸ)ರು ಸದಾ "ಸತ್ಯದ ಹಾದಿಯಲ್ಲಿ ಸಂಚರಿಸುವಂತೆ ಮಾಡು" ಎಂದು ಪ್ರಾರ್ಥಿಸುತ್ತಿದ್ದರು. ವಿಶುದ್ಧ ಕುರ್‌ಆನ್ ಹೇಳುವುದನ್ನು ನೋಡಿರಿ:

"(ಪ್ರವಾದಿಯವರೇ), ನೀವು (ಹೀಗೆ) ಪ್ರಾರ್ಥಿಸಿರಿ: ನನ್ನ ಪ್ರಭೂ, ನೀನು ನನ್ನನ್ನು ಸತ್ಯದ ಪ್ರವೇಶ(ದ್ವಾರದ ಮೂಲಕ) ಪ್ರವೇಶಿಸುವಂತೆಯೂ ಸತ್ಯದ ನಿರ್ಗಮನ(ದ್ವಾರದ ಮೂಲಕ) ನಿರ್ಗಮಿಸುವಂತೆಯೂ ಮಾಡು ಮತ್ತು ನಿನ್ನ ವತಿಯಿಂದ ನನಗೆ ನೆರವಾಗುವ ಒಂದು ಶಕ್ತಿಯನ್ನು ಒದಗಿಸಿ ಕೊಡು".

ಯಾರೇ ಆದರೂ ಮಾನಸಿಕವಾಗಿಯೂ ಶಾರೀರಿಕವಾಗಿಯೂ ಧ್ವಂಸಗೊಳ್ಳುವಂತಹ ಶತ್ರುಗಳ ನಿರಂತರ ಪೀಡನೆಗಳ ನಡುವೆಯೂ ಅಲ್ಲಾಹನ ರಸೂಲ್(ಸ)ರು ಅತಿಯಾದ ನಿರೀಕ್ಷೆಯೊಂದಿಗೆ ಶತ್ರುಗಳ ವಿರುದ್ಧ ವಿಜಯಕ್ಕಾಗಿ ಹೃದಯಾಂತರಾಳದಿಂದ ಪ್ರಾರ್ಥಿಸುತ್ತಿದ್ದರು. ಸಂದಿಗ್ಧ ಸ್ಥಿತಿಗಳಲ್ಲಿ ಅಲ್ಲಾಹನಲ್ಲಿ ಭರವಸೆಯಿಟ್ಟು ಪ್ರಾರ್ಥಿಸಿದರೆ ನಾವು ತಿಳಿಯದಂತೆಯೇ ಅಲ್ಲಾಹನ ಸಹಾಯ ಬಂದೆರಗುವುದರಲ್ಲಿ ಸಂದೇಹವಿಲ್ಲ.

**ದುಃಖಿಸಬೇಡಿರಿ, ಅಲ್ಲಾಹು ನಮ್ಮೊಂದಿಗಿದ್ದಾನೆ:**

ಪ್ರವಾದಿ(ಸ)ರ ಶಿರಚ್ಛೇದಕ್ಕಾಗಿ ಶತ್ರುಗಳು ಅಲ್ಲಲ್ಲಿ ಹೊಂಚು ಹಾಕುತ್ತಿದ್ದರು. ಊರೆಲ್ಲಾ ಹುಡುಕಾಡಿದರು. ಪ್ರವಾದಿ(ಸ)ರು ಮತ್ತು ಅಬೂಬಕರ್(ರ)ರವರು ತಂಗಿದ್ದ ಗುಹಾದ್ವಾರದ ವರೆಗೆ ಶತ್ರುಗಳು ತಲುಪುತ್ತಾರೆ. ಇದನ್ನು ಕಂಡು ಗಾಬರಿಗೊಂಡ ಅಬೂಬಕರ್(ರ)ರನ್ನು ಪ್ರವಾದಿ(ಸ)ರು ಹೀಗೆ ಸಮಾಧಾನಿಸುತ್ತಾರೆ: "ದುಃಖಿಸಬೇಡಿರಿ. ಅಲ್ಲಾಹು ಖಂಡಿತಾ ನಮ್ಮೊಂದಿಗಿದ್ದಾನೆ" (ಕುರ್‌ಆನ್ 9:40).

ಸುತ್ತುಮುತ್ತಲೆಲ್ಲಾ ಶತ್ರುಗಳು. ಇಂತಹ ಒಂದು ಸನ್ನಿವೇಶದಲ್ಲಿ ಎದೆಗುಂದದೆ, ಧೈರ್ಯಗೆಡದೆ ಹಿಡಿದು ನಿಲ್ಲುವ ಶಕ್ತಿ ಕಳಂಕರಹಿತ ಈಮಾನಿಗಲ್ಲದೆ ಬೇರಾವುದಕ್ಕೂ ಸಾಧ್ಯವಿಲ್ಲ. ಇಲ್ಲೆಲ್ಲಾ ಬಹುದೇವಾರಾಧಕರನ್ನು ಅಲ್ಲಾಹು ಪರಾಭವಗೊಳಿಸಿದ್ದು ಯಾಕಾಗಿ? ಅಸತ್ಯ ಅಳಿಯಲು ಮತ್ತು ಸತ್ಯವು ಪ್ರಕಾಶಮಾನವಾಗಿ ಉಳಿಯಲಿಕ್ಕಾಗಿತ್ತು. ಅಲ್ಲಾಹು ಮತ್ತು ಅವನ ಸಂದೇಶವಾಹಕರೊಡನೆ ಯುದ್ಧ ಘೋಷಿಸಿದ ಶತ್ರುಗಳನ್ನು ಆಕ್ಷೇಪಿಸುತ್ತಾ ಮತ್ತು ಪ್ರವಾದಿ(ಸ)ರಿಗೆ ಅಲ್ಲಾಹು ನೀಡಿದ ಅನುಗ್ರಹಗಳನ್ನು ಎತ್ತಿ ಹೇಳುತ್ತಾ ಪವಿತ್ರ ಕುರ್‌ಆನ್ ಪ್ರಸ್ತಾಪಿಸಿದ್ದನ್ನು ನೋಡಿರಿ:

"ನೀವು ಅವರಿಗೆ ಸಹಾಯ ಮಾಡದಿದ್ದರೆ ಚಿಂತಿಲ್ಲ. ಅವರನ್ನು ಸತ್ಯನಿಷೇಧಿಗಳು ಹೊರಗಟ್ಟಿದ ಸಂದರ್ಭದಲ್ಲಿ ಮತ್ತು ಅವರು ಇಬ್ಬರಲ್ಲಿ ಒಬ್ಬರಾಗಿ ಅಥವಾ ಅವರಿಬ್ಬರೂ ಗುಹೆಯಲ್ಲಿದ್ದ ಸಂದರ್ಭದಲ್ಲಿ ಅಲ್ಲಾಹು ಅವರಿಗೆ ಸಹಾಯ ಮಾಡಿರುವನು. ಅವರು ತಮ್ಮ ಸಂಗಾತಿಯೊಂದಿಗೆ ದುಃಖಿಸಬೇಡಿರಿ, 'ಅಲ್ಲಾಹು ಖಂಡಿತಾ ನಮ್ಮೊಂದಿಗಿದ್ದಾನೆ' ಎಂದು ಹೇಳಿದ ಸಂದರ್ಭ (ವನ್ನು ಸ್ಮರಿಸಿರಿ). ಆಗ ಅಲ್ಲಾಹು ತನ್ನ ವತಿಯ ಶಾಂತಿಯನ್ನು ಅವರ ಮೇಲೆ ಇಳಿಸಿದನು. ನೀವು ಕಾಣದಂತಹ ಸೈನ್ಯಗಳೊಂದಿಗೆ ಅವರಿಗೆ ಸಹಾಯ ಮಾಡಿದನು ಮತ್ತು ಸತ್ಯನಿಷೇಧಿಗಳ ಮಾತನ್ನು ಅತ್ಯಂತ ಕೀಳು ಮಟ್ಟಕ್ಕಿಳಿಸಿದನು. ಅಲ್ಲಾಹನ ಮಾತೇ ಅತ್ಯಂತ ಉನ್ನತವಾದುದು. ಅಲ್ಲಾಹು ಪ್ರತಾಪಶಾಲಿಯೂ ವಿವೇಕಪೂರ್ಣನೂ ಆಗಿರುವನು" (ಕುರ್‌ಆನ್ 9:40).

ತೌಹೀದ್‌ಗಾಗಿ ನಾವು ಎಲ್ಲವನ್ನೂ ತೊರೆದರೆ ಕಷ್ಟವಾಗದೇ ಎಂಬ ಸಂಶಯ ಸತ್ಯವಿಶ್ವಾಸಿಗಳಲ್ಲಿ ಉಂಟಾಗಬಾರದು. ಅಲ್ಲಾಹನ ಮಾರ್ಗದಲ್ಲಿ ಹೊರಟವರಿಗೆ ಅಭಯಸ್ಥಾನ ಮತ್ತು ಬದುಕಿನ ವಿಶಾಲತೆಯನ್ನು ಅಲ್ಲಾಹು ವಾಗ್ದಾನ ಮಾಡಿದ್ದಾನೆ. ನನ್ನ ಮಕ್ಕಳ ಸ್ಥಿತಿಯೇನಾದೀತು? ಜೀವನ ಮಾರ್ಗವೇನಾದೀತು? ಎಂದೆಲ್ಲಾ ಯೋಚಿಸಿ ಆತಂಕದ ಅಲೆಯಲ್ಲಿ ಸಿಲುಕಬೇಕಾಗಿಲ್ಲ. ಅಲ್ಲಾಹನಲ್ಲಿ ಭರವಸೆಯಿಟ್ಟು ಮುನ್ನಡೆದರೆ ಅವನು ನಮ್ಮ ಕೈ ಬಿಡಲಾರ.

"ಯಾರು ಅಲ್ಲಾಹನ ಮಾರ್ಗದಲ್ಲಿ ತನ್ನ ನಾಡನ್ನು ತೊರೆಯುತ್ತಾನೋ ಅವನು ಭೂಮಿಯಲ್ಲಿ ಅನೇಕ ಅಭಯ ಸ್ಥಾನಗಳನ್ನು ಮತ್ತು ಜೀವನ ವೈಶಾಲ್ಯತೆಗಳನ್ನು ಕಾಣುವನು. ಯಾರಾದರೂ ತನ್ನ ಮನೆಯಿಂದ ಅಲ್ಲಾಹು ಮತ್ತು ಅವನ ಸಂದೇಶವಾಹಕರೆಡೆಗೆ ಹಿಜ್ರಾ ಹೊರಟು, (ದಾರಿ ಮಧ್ಯೆ) ಮರಣವು ಅವನನ್ನು ವಶಪಡಿಸಿದರೆ ಅವನ ಪ್ರತಿಫಲವು ಅಲ್ಲಾಹನ ಬಳಿ ಖಾತ್ರಿಯಾಗಿ ಬಿಟ್ಟಿತು. ಅಲ್ಲಾಹು ಅತೀ ಹೆಚ್ಚು ಕ್ಷಮಿಸುವವನೂ ವಿಶೇಷವಾಗಿ ದಯೆ ತೋರುವವನೂ ಆಗಿರುವನು" (ಕುರ್‌ಆನ್ 4:100).

**ಸಾಹೋದರ್ಯತೆಯ ಅನುಪಮ ಮಾದರಿ:**

ಅಲ್ಲಾಹ ಸಂದೇಶವಾಹಕರು(ಸ) ಮದೀನಾಕ್ಕೆ ತಲುಪಿದರು. ಪ್ರವಾದಿ(ಸ)ರು ತಮ್ಮ ಅತಿಥಿಯಾಗಿ ಸಿಗಬೇಕೆಂದು ಅಲ್ಲಿನ ಪ್ರತಿಯೊಂದು ಕುಟುಂಬದವರು ಆಶಿಸಿದರು. ಮಕ್ಕಾದಿಂದ ಹಿಜ್ರಾ ಹೋದವರಲ್ಲಿ ಮತ್ತು ಮದೀನಾದ ಸಹೋದರರಲ್ಲಿ ಪ್ರವಾದಿ(ಸ)ರು ಸಾಹೋದರ್ಯತೆ ಬೆಸೆಯಲು ಹೇಳಿದರು. ಅವರು ಹಾಗೆಯೇ ಮಾಡಿದರು. ಮಕ್ಕಾದಿಂದ ವಲಸೆ ಬಂದ ಮುಹಾಜಿರ್‌ಗಳಾದ ಸಹೋದರರಿಗೆ ಮದೀನಾದ ಅನ್ಸಾರ್‌ಗಳು ಎಲ್ಲವನ್ನೂ ನೀಡಿ ಸಹಕರಿಸಲು ಸನ್ನದ್ಧರಾದರು. ಆದರೆ ಅನ್ಸಾರ್‌ಗಳು ಕೊಟ್ಟ ಆಹಾರವನ್ನು ಭುಜಿಸಿ ಆರಾಮವಾಗಿ ಕಾಲ ಕಳೆಯಲು ಮುಹಾಜಿರ್‌ಗಳು ಒಪ್ಪಲಿಲ್ಲ. ಕಷ್ಟಪಟ್ಟು ದುಡಿದು ಸಂತೃಪ್ತಿಯ ಜೀವನ ಸಾಗಿಸಲು ಅವರು ಬಯಸಿದ್ದರು. ಅನ್ಸಾರ್‌ಗಳು ಮತ್ತು ಮುಹಾಜಿರ್‌ಗಳು ಏಕೋದರ ಸಹೋದರರಾಗಿ ಕಲೆತು ಸಾಹೋದರ್ಯತೆಯ ಸಂಕೋಲೆಯನ್ನು ಬಿಗಿದರು. ಕುರ್‌ಆನ್ ಹೇಳುವುದನ್ನು ನೋಡಿರಿ:

ಅಶ್ರಫಲಿ, ನಡುಪದವು

"ಅವರ(ಮುಹಾಜಿರ್‌ಗಳ) ಆಗಮನಕ್ಕಿಂತ ಮುಂಚಿತವಾಗಿ ವಾಸಸ್ಥಳ ಮತ್ತು ವಿಶ್ವಾಸವನ್ನು ಸಿದ್ಧಗೊಳಿಸಿದವರಿಗೂ(ಅನ್ಸಾರ್‌ಗಳಿಗೂ ಇದೆ). ಅವರು ಸ್ವಂತ ಊರನ್ನು ಬಿಟ್ಟು ತಮ್ಮ ಬಳಿಗೆ ಬಂದವರನ್ನು ಪ್ರೀತಿಸುವರು. ಅವರಿಗೆ(ಮುಹಾಜಿರ್‌ಗಳಿಗೆ) ನೀಡಲಾದ ಸಂಪತ್ತಿನ ಕುರಿತು ಅವರು(ಅನ್ಸಾರ್‌ಗಳು) ತಮ್ಮ ಮನಸ್ಸಿನಲ್ಲಿ ಯಾವ ಅಗತ್ಯವನ್ನೂ ಕಾಣಲಾರರು. ತಮಗೆ ಬಡತನವಿದ್ದರೂ ಅವರು ತಮಗಿಂತ ಹೆಚ್ಚಾಗಿ ಇತರರಿಗೆ ಪ್ರಾಮುಖ್ಯತೆಯನ್ನು ನೀಡುತ್ತಾರೆ. ಯಾರು ತನ್ನ ಮನಸ್ಸಿನ ಜಿಪುಣತೆಯಿಂದ ರಕ್ಷಿಸಲ್ಪಡುತ್ತಾರೋ ಅವರೇ ವಿಜಯಿಗಳು" (ಕುರ್‌ಆನ್ 59:9).

ಹೊಸ ವರ್ಷವು ವಿಶ್ವಾಸದ, ಸಮರ್ಪಣೆಯ ಮತ್ತು ಸಾಹೋದರ್ಯತೆಯ ಅನಿವಾರ್ಯತೆಯನ್ನು ನಮ್ಮೊಡನೆ ನೆನಪಿಸುತ್ತದೆ. ಇತಿಹಾಸದ ಪುನರಧ್ಯಯನಕ್ಕೆ ನಾವು ಮುಂದಾಗೋಣ. ಉತ್ತಮ ನಾಳೆಗಾಗಿ ಇತಿಹಾಸದ ಪುಟಗಳಿಂದ ನಾವು ಸತ್ಯವನ್ನು ಕಂಡು ಕೊಳ್ಳೋಣ. •

# ಹಿಂದು ಧರ್ಮದಲ್ಲಿ ಗೋಮಾಂಸ ಭಕ್ಷಣೆಗೆ ಅನುಮತಿ ಇದೆಯೇ?

ಈ ಪ್ರಶ್ನೆಗೆ ಯಾವುದೇ ಹಿಂದುವೂ ಖಂಡಿತ ಇಲ್ಲ ಎಂಬ ಉತ್ತರ ಕೊಡಬಯಸುವನು. ಯಾಕೆಂದರೆ ಎಲ್ಲರೂ ತಿಳಿದಿರುವಂತೆ ಹಿಂದೂಗಳಿಗೆ ಗೋವು ಪವಿತ್ರ ಪ್ರಾಣಿ ಮತ್ತು ಹಿಂದೂಗಳು ಗೋಹತ್ಯಾ ವಿರೋಧಿಗಳು ಎಂದಷ್ಟೇ ಇದೆ. ಆದರೆ ಹಿಂದೂಗಳ ವೇದ ಗ್ರಂಥದಲ್ಲಿ ಹಿಂದೂಗಳು ಗೋಹತ್ಯಾ ವಿರೋಧಿಗಳು ಎಂದು ಎಲ್ಲಿಯೂ ಕಾಣಲು ಸಾಧ್ಯವಿಲ್ಲ. ಋಗ್ವೇದದಲ್ಲಿ ಈ ಕುರಿತು ಎರಡು ರೀತಿಯ ಪ್ರಮಾಣಗಳಿವೆ. ಒಂದರಲ್ಲಿ ಗೋವನ್ನು ಅಘನ್ಯ ಪ್ರಾಣಿ ಎಂದು ಹೇಳಲಾಗಿದೆ. ಇನ್ನೊಂದರಲ್ಲಿ ಗೋವನ್ನು ಪವಿತ್ರ ಎಂದು ಉಲ್ಲೇಖಿಸಲಾಗಿದೆ. ಹಿಂದೂಗಳಿಗೆ ಧರ್ಮದಲ್ಲಿ ವೇದವೇ ಅಂತಿಮ ಪ್ರಮಾಣವಾಗಿದೆ. ಆರ್ಯರು ಗೋವನ್ನು ರುದ್ರರ ತಾಯಿ, ವಸುಗಳ ಪುತ್ರಿ, ಆದಿತ್ಯರ ತಂಗಿ, ಅಮೃತದ ಕೇಂದ್ರ ಸ್ಥಾನ ಹಾಗೂ ದೇವಿ ಎಂದೂ ಕರೆಯುತ್ತಿದ್ದರು.

ಋಗ್ವೇದದಲ್ಲಿ ಗೋವನ್ನು ಅಘನ್ಯ ಎಂದು ಯಾವ ಸಂದರ್ಭದಲ್ಲಿ ಹೇಳಲಾಗಿದೆಯೆಂದರೆ ಯಾವಾಗ ಗೋವು ಹಾಲು ನೀಡುತ್ತಲಿರುವುದೋ ಆ ಸಂದರ್ಭ. ಆ ಸಂದರ್ಭದಲ್ಲಿ ಅದರ ಹತ್ಯೆ ಸಲ್ಲದು ಎಂದು ಹೇಳಲಾಗಿದೆ. ಆದರೂ ಸತ್ಯಾಂಶವೇನೆಂದರೆ ವೈದಿಕ ಕಾಲದಲ್ಲಿ ಗೋವು ಆದರಣೀಯವಾಗಿತ್ತು, ಪವಿತ್ರವಾಗಿತ್ತು ಮತ್ತು ಈ ಕಾರಣಕ್ಕಾಗಿಯೇ ಆ ಕಾಲದ ಗೋವಿನ ಹತ್ಯೆಯಾಗುತ್ತಲಿತ್ತು. ಶ್ರೀ ಕಾಣೆ ತನ್ನ "ಧರ್ಮಶಾಸ್ತ್ರ ವಿಚಾರ" ಎಂಬ ಗ್ರಂಥದಲ್ಲಿ ಹೇಳಿದ್ದೇನೆಂದರೆ, ವೈದಿಕ ಕಾಲದಲ್ಲಿ ಗೋವು ಪವಿತ್ರವಾಗಿತ್ತು ಮತ್ತು ಅದರ ಪಾವಿತ್ರ್ಯತೆಯ ಕಾರಣದಿಂದಾಗಿಯೇ "ವಜ್‌ಸನೇಯ್ ಸಂಹಿತ"ದಲ್ಲಿ ಗೋಮಾಂಸ ತಿನ್ನಬೇಕು ಎಂದು ಉಲ್ಲೇಖಿಸಿದೆ.

ಋಗ್ವೇದದ ಇಂದ್ರ ಕಥನದಲ್ಲಿ ಬರುತ್ತದೆ (10, 86, 14) "ಅವರಿಗೆ ಕುದುರೆ, ಎತ್ತು, ಹಸು ಹಾಗೂ ನರಿಯನ್ನು ಬಲಿ ನೀಡಲಾಗುತ್ತಿತ್ತು. ತೈತ್ತಿರೀಯ ಬ್ರಾಹ್ಮಣ್ಯದಲ್ಲಿ ಕಾಮ್ಯೇಷ್ಟಿ ಯಜ್ಞದ ವರ್ಣನೆಯಿದೆ. ಅದರಲ್ಲಿ ಕೇವಲ ಹಸು ಮತ್ತು ಗೋವನ್ನು ಬಲಿ ಕೊಡುವ ಆಜ್ಞೆ ಮಾತ್ರವಲ್ಲದೆ ಅದರ ಜೊತೆಗೆ ಇಂದ್ರನಿಗೆ ಬಲಿ ನೀಡಲು ಕೃಶವಾದ ಎತ್ತನ್ನು ಆಯ್ಕೆ ಮಾಡಬೇಕು ಮತ್ತು ರುದ್ರನಿಗೆ ಬಲಿ ನೀಡಲು ಕೆಂಬಣ್ಣದ ಹಸುವನ್ನು ಆಯ್ಕೆ ಮಾಡಿಕೊಳ್ಳಬೇಕು ಎಂಬ ಆಜ್ಞೆಯೂ ಇದೆ.

ಇನ್ನು ಆಪಸ್ತಂಭ ಧರ್ಮ ಸ್ತೋತ್ರದಲ್ಲಿ ನೋಡುವುದಾದರೆ 14, 14 ಮತ್ತು 17ರ ಶ್ಲೋಕದಲ್ಲಿ ಹಸು ಮತ್ತು ಎತ್ತು ಪವಿತ್ರ ಪ್ರಾಣಿಗಳಾಗಿವೆ. ಆದುದರಿಂದ ಅದು ಭಕ್ಷಿಸಲ್ಪಡಬೇಕು.

ಆರ್ಯರಲ್ಲಿ ವಿಶೇಷ ಅತಿಥಿಗಳ ಸ್ವಾಗತಕ್ಕಾಗಿ ಒಂದು ಪ್ರತ್ಯೇಕ ಪದ್ಧತಿಯಿತ್ತು. ಅದೇನೆಂದರೆ ಅತಿಥಿಗಳಿಗೆ ಅತ್ಯುತ್ತಮ ವಸ್ತುವನ್ನು ನೀಡುವುದು. ಈ ಪದ್ಧತಿಯನ್ನು "ಮಧು ಪರ್ಕ" ಎಂದು ಕರೆಯುತ್ತಿದ್ದರು. ಬೇರೆ ಬೇರೆ ಗ್ರಂಥಗಳಲ್ಲಿ ಈ "ಮಧು ಪರ್ಕ" ಪದ್ಧತಿಯ ಕುರಿತು ಬೇರೆ ಬೇರೆ ಅಭಿಪ್ರಾಯಗಳಿವೆ. ಮಾಧವ ಗೃಹ ಸೂತ್ರ ಎಂಬ ಗ್ರಂಥದ ಪ್ರಕಾರ (1, 9, 22) ವೇದದ ಆಜ್ಞೆ ಏನೆಂದರೆ "ಮಧು ಪರ್ಕ" ಮಾಂಸದ ಹೊರತು ನಡೆಯಕೂಡದು. ಹಸುವಿನ ಬಲಿ ನೀಡದಿದ್ದಲ್ಲಿ ಮೇಕೆಯನ್ನು ಬಲಿ ನೀಡಬೇಕು. ಭೌದಾಯನ ಗೃಹ ಸೂತ್ರದ ಅನುಸಾರ ಹಸುವಿನ ಬಲಿ ನೀಡದಿದ್ದಲ್ಲಿ ಮೇಕೆ ಅದಿಲ್ಲದಿದ್ದರೆ ಯಾವುದಾದರೂ ಕಾಡು ಪ್ರಾಣಿಯನ್ನು ಬಲಿ ನೀಡಬೇಕು ಮತ್ತು ಯಾವುದೇ ಮಾಂಸವನ್ನೂ ಬಲಿ ನೀಡದಿದ್ದಲ್ಲಿ ಪಾಯಸ ಮಾಡಬೇಕು.

ಅತಿಥಿ ಸತ್ಕಾರಕ್ಕಾಗಿ ವೇದ ಕಾಲದಲ್ಲಿ ಗೋಹತ್ಯೆ ಒಂದು ಸಾಮಾನ್ಯ ಸಂಗತಿಯಾಗಿತ್ತು. ಹಾಗೆ ಈ ಅನಿವಾರ್ಯಕ ಹತ್ಯೆಯಿಂದ ಪಾರಾಗಲು ಅಶ್ವಾಲಯನ ಗೃಹ ಸೂತ್ರದ ಉಪಾಯವೇನೆಂದರೆ, ಅತಿಥಿಗಳ ಸತ್ಕಾರಕ್ಕೆ ಹಸುವನ್ನು ಬಳಸಿರಿ. (ಇದರಿಂದಾಗಿಯೇ ಇತರ ಸೂತ್ರಗಳಲ್ಲಿ ಹಲವು ಬಾರಿ ಹಸುವನ್ನು ಬಲಿ ನೀಡದಿದ್ದಲ್ಲಿ ಎಂದು ಹೇಳಲಾಗಿದೆ).

ಪ್ರಾಚೀನ ಆರ್ಯರಲ್ಲಿ ಯಾರಾದರೂ ಮರಣ ಹೊಂದಿದರೆ ಪ್ರಾಣಿಯನ್ನು ಬಲಿ ನೀಡಲಾಗುತ್ತಿತ್ತು ಮತ್ತು ಆ ಪ್ರಾಣಿಯ ಅಂಗವನ್ನು ಬೇರ್ಪಡಿಸಿ ಮೃತ ವ್ಯಕ್ತಿಯ ಚಿತೆಯೊಂದಿಗೆ ದಹಿಸಲಾಗುತ್ತಿತ್ತು ಮತ್ತು ಆ ಪ್ರಾಣಿ ಹಸು ಆಗಿರುತ್ತಿತ್ತು. ಇದರ ಕುರಿತು ಅಶ್ವಾಲಯನ ಗೃಹ ಸೂತ್ರದಲ್ಲಿ ವರ್ಣನೆಯಿದೆ.

ಈ ಎರಡು ಪ್ರಮಾಣದಲ್ಲಿ ಗೋಹತ್ಯೆಯ ಬಗ್ಗೆ ಯಾವುದನ್ನು ಸರಿ ಎಂದು ತಿಳಿಯಬೇಕು? ನಿಜಾರ್ಥದಲ್ಲಿ ಎರಡೂ ಪ್ರಮಾಣಗಳು ಸುಳ್ಳಲ್ಲ. ಗೋಹತ್ಯೆಯ ನಿಷೇಧದ ಆಜ್ಞೆಗಳು ಆ ಕಾಲದಲ್ಲಿ ಅತ್ಯಧಿಕವಾಗಿ ನಡೆಯುತ್ತಿದ್ದ ಗೋಹತ್ಯೆಯನ್ನು ತಡೆಯುವ ನಿಟ್ಟಿನಲ್ಲಿರುವ ಅಭಿಯಾನ ಮಾತ್ರವಾಗಿದೆ ಎಂದು ಪ್ರಮಾಣಗಳಿಂದಲೇ ತಿಳಿದು ಬರುತ್ತದೆ.

ಇದೀಗ ಇಷ್ಟೂ ಪ್ರಮಾಣಗಳನ್ನು ನೋಡಿದ ನಂತರ ಅರ್ಥೈಸಿಕೊಳ್ಳಬೇಕಾದ ಮುಖ್ಯ ಅಂಶವೆಂದರೆ ಬ್ರಾಹ್ಮಣ ಮತ್ತು ಬ್ರಾಹ್ಮಣರಲ್ಲದ ಹಿಂದೂಗಳು ಒಂದು ಕಾಲದಲ್ಲಿ ಮಾಂಸಹಾರಿಗಳಾಗಿದ್ದರು. ಮಾತ್ರವಲ್ಲದೆ ಗೋಮಾಂಸವನ್ನೂ ತಿನ್ನುತ್ತಿದ್ದರು ಎಂಬುದು. ಸ್ವಾಮೀ ವಿವೇಕಾನಂದರು ಕೂಡಾ ಹೇಳಿದ್ದಾರೆ: "ಪುರಾತನ ಭಾರತೀಯ ಧಾರ್ಮಿಕ ವಿಧಿ ವಿಧಾನಗಳು ನಿಮ್ಮನ್ನು ಆಶ್ಚರ್ಯಕ್ಕೀಡು ಮಾಡಬಹುದು. ಅಲ್ಲಿ ಗೋಮಾಂಸ ತಿನ್ನದವನು ಉತ್ತಮ ಹಿಂದುವೇ ಅಲ್ಲ". (Complete works of Swami Vivekananda, Volume: 3, Page No.: 536)

ಆದರೆ ಇವತ್ತಿನ ವಿಪರ್ಯಾಸವೆಂದರೆ ವೃದ್ಧಾಪ್ಯವನ್ನು ತಲುಪಿದ ತಾಯಿಂದಿರನ್ನು ಸಾಕಲಾರದೆ ವೃದ್ಧಾಶ್ರಮಕ್ಕೆ ಅಟ್ಟುವಂತಹ ಕಟುಕ ಮಕ್ಕಳಿರುವ ಈ ಕಾಲದಲ್ಲಿ ಮಾನವನ ಉಪಯೋಗಕ್ಕಾಗಿಯೇ ಭಗವಂತನು ಸೃಷ್ಟಿಸಿದ (ಮಾನವನ ಉಪಯೋಗಕ್ಕಿಲ್ಲದ ಯಾವುದನ್ನೂ ಸೃಷ್ಟಿಕರ್ತನ ಸೃಷ್ಟಿಯಲ್ಲಿ ನಮಗೆ ಕಾಣಲು ಸಾಧ್ಯವಿಲ್ಲ). ಗೋಮಾತೆ ಎಂಬ ಹೆಸರಲ್ಲಿ ಮತೀಯ ಸೌಹಾರ್ದವನ್ನು ಹಾಳು ಮಾಡುತ್ತಿರುವುದು ನಿಜಕ್ಕೂ ಬೇಸರದ ಸಂಗತಿ.

(ಕಲಿಯಿರಿ ಮತ್ತು ಕಲಿಸಿರಿ ಎಂಬ ವಾಟ್ಸ್‌ಆಪ್ ಗ್ರೂಪಿನಿಂದ)

ಡಾ. ನೌಫಲ್ ಕರೀಮ್

# ಧಾರ್ಮಿಕ ಪ್ರಶ್ನೋತ್ತರಗಳು

## ಪತ್ನಿಯ ಹಜ್ಜ್‌ನ ವೆಚ್ಚ ಪತಿಗೆ ಕಡ್ಡಾಯವೇ?

*ಪ್ರ: ಪತ್ನಿಯನ್ನು ಹಜ್ಜ್‌ಗೆ ಕಳುಹಿಸುವುದು ಅಥವಾ ಆಕೆಯ ಹಜ್ಜ್‌ನ ವೆಚ್ಚ ಭರಿಸುವುದು ಪತಿಯ ಮೇಲೆ ಕಡ್ಡಾಯವಿದೆಯೇ?*

ಉ: ಪತಿ ಶ್ರೀಮಂತನಾಗಿದ್ದರೂ ತನ್ನ ಪತ್ನಿಯ ಹಜ್ಜ್‌ನ ಖರ್ಚುವೆಚ್ಚ ವಹಿಸುವುದು ಅವನ ಮೇಲೆ ಕಡ್ಡಾಯವಿಲ್ಲ. ಆದರೆ ತನ್ನ ಔದಾರ್ಯದಿಂದ ಆತ ಅವಳನ್ನು ಹಜ್ಜ್‌ಗೆ ಕರೆದುಕೊಂಡು ಹೋಗುವುದಾದರೆ ಅದಕ್ಕಾಗಿ ಅವನಿಗೆ ಪ್ರತಿಫಲ ಲಭಿಸಲಿದೆ. ಪತ್ನಿಯನ್ನು ಹಜ್ಜ್‌ಗೆ ಕಳುಹಿಸದ ಕಾರಣಕ್ಕೆ ಪತಿ ತಪ್ಪಿತಸ್ಥನಲ್ಲ. ಏಕೆಂದರೆ ಪವಿತ್ರ ಕುರ್‌ಆನ್ ಆಗಲೀ ಹದೀಸ್ ಆಗಲೀ ಪತಿಯ ಮೇಲೆ ಪತ್ನಿಯ ಹಜ್ಜ್‌ನ ಹೊಣೆ ಹೇಳಿರುವುದಿಲ್ಲ. ಮಹ್ರ್ ಮತ್ತು ದೈನಂದಿನ ಖರ್ಚುವೆಚ್ಚಗಳನ್ನಷ್ಟೇ ಪತಿಯ ಮೇಲೆ ಕಡ್ಡಾಯಗೊಳಿಸಿರುವ ಇಸ್ಲಾಮ್ ಅವಳ ಸಾಲ ಪಾವತಿಸುವುದನ್ನಾಗಲೀ, ಆಕೆಯ ಝಕಾತ್ ನೀಡುವುದನ್ನಾಗಲೀ ಪತಿಗೆ ಕಡ್ಡಾಯಗೊಳಿಸಿರುವುದಿಲ್ಲ. ಇದೇ ವಿಧಿ ಹಜ್ಜ್‌ಗೂ ಅನ್ವಯಿಸುತ್ತದೆ.

**ಶೈಖ್ ಸಾಲಿಹ್ ಅಲ್-ಮುನಜ್ಜಿದ್**

## ಪುರುಷ ವೈದ್ಯರನ್ನು ಸಂದರ್ಶಿಸುವುದರ ವಿಧಿ

*ಪ್ರ: ನಾನು ಚರ್ಮರೋಗಿಯಾದ ಓರ್ವ ಹೆಣ್ಣು. ತಜ್ಞ ವೈದ್ಯರ ಬಳಿಗೆ ಹೋದಾಗ ನನ್ನ ಕೈಗಳು ಹಾಗೂ ಕಾಲಿನ ಮಂಡಿ ತನಕ ಆತನ ಮುಂದೆ ಪ್ರದರ್ಶಿಸಬೇಕಾದ ಅನಿವಾರ್ಯ ಸ್ಥಿತಿ ಉಂಟಾಗುತ್ತದೆ. ಆದರೆ ನನ್ನ ಜತೆಯಲ್ಲಿ ನರ್ಸ್‌ಗಳಿರುತ್ತಾರೆ. ಇಸ್ಲಾಮ್ ಪ್ರಕಾರ ಇದು ಸರಿಯೇ?*

ಉ: ಔರತ್‌ನಲ್ಲಿ ಘನ ಮತ್ತು ಲಘು ಎಂದು ಎರಡು ವಿಧವಿದೆ. ಹೊಕ್ಕುಳಿನಿಂದ ಕಾಲಿನ ಮಂಡಿಯ ವರೆಗಿನ ಭಾಗ ಘನ ಅಥವಾ ಹಿರಿಯ ಗೌಪ್ಯ ಸ್ಥಳ ಎನಿಸುತ್ತದೆ. ಮಹಿಳೆಯ ಈ ಔರತ್(ಗೌಪ್ಯ ಭಾಗ)ನ್ನು ಪುರುಷ ವೈದ್ಯ ನೋಡಬಾರದು. ಆಕೆ ಅದನ್ನು ತೋರಿಸುವುದೂ ನಿಷಿದ್ಧ.

ಆದರೆ ತಜ್ಞೆಯಾದ ಮಹಿಳಾ ವೈದ್ಯರು ಇಲ್ಲದಿದ್ದಲ್ಲಿ ಅನಿವಾರ್ಯ ಸ್ಥಿತಿ ಎದುರಾದಾಗ ಮಾತ್ರ ಪುರುಷ ವೈದ್ಯ ಮಹಿಳೆಯ ಔರತ್ ದರ್ಶಿಸಬಹುದು.

ಉದಾ: ಕ್ಲಿಷ್ಟಕರವಾದ ಒಂದು ಶಸ್ತ್ರಕ್ರಿಯೆಯ ಮೂಲಕ ಮಗುವನ್ನು ಹೊರತೆಗೆಯುವಂತಹ ಸಂದರ್ಭ. ಆದರೆ ಲಘುವಾದ ಔರತ್ ಅಗತ್ಯ ಸಂದರ್ಭಗಳಲ್ಲಿ (ಅಂದರೆ ಚಿಕಿತ್ಸೆ ಮುಂತಾದ) ಪುರುಷನಿಗೆ ತೋರಿಸುವುದಕ್ಕೆ ವಿರೋಧವಿಲ್ಲ. ಮಹಿಳಾ ವೈದ್ಯರಿದ್ದರೆ ಅವರ ಬಳಿ ತೆರಳುವುದಾಗಿದೆ ಸುರಕ್ಷಿತ ಮತ್ತು ಉತ್ತಮ.

**ಶೈಖ್ ಡಾ| ಅಖೀಲ್ ವಶ್ಮಿ**

## ಪ್ರತಿ ದಿನ ಕಸ್ರ್ ಮಾಡುವುದು

*ಪ್ರ: ನಾನು ಪ್ರತಿ ದಿನ ನನ್ನ ವಾಸಸ್ಥಳದಿಂದ ಕೆಲಸದ ಸ್ಥಳಕ್ಕೆ 90 ಕಿ.ಮೀ. ಯಾತ್ರೆ ಹೋಗುತ್ತೇನೆ. ನನಗೆ ನಮಾಝ್ ಕಸ್ರ್ ಮಾಡಲು ವಿನಾಯಿತಿ ಇದೆಯೇ?*

ಉ: ಇದೆ. ಎಲ್ಲಾ ವಿಧದ ಧರ್ಮಸಮ್ಮತ ಯಾತ್ರೆಯಲ್ಲೂ ನಮಾಝ್ ಕಸ್ರ್ ಮಾಡಬಹುದು. 90 ಕಿ.ಮೀ. ಅಥವಾ ಇಂತಿಷ್ಟೇ ದೂರವಿರಬೇಕು ಎಂದು ಪ್ರಮಾಣಬದ್ಧವಾಗಿ ವರದಿಯಾಗಿಲ್ಲ. ಸಾಮಾನ್ಯವಾಗಿ ಯಾತ್ರೆ ಎಂದು ಕರೆಯಲು ಯೋಗ್ಯವಾದ ದೂರ ನೀವು ಹೇಳಿದುದಕ್ಕಿಂತ ಕಡಿಮೆ ಅಂತರದಲ್ಲಿದ್ದರೂ ಜಂಅ್ ಮತ್ತು ಕಸ್ರ್ ಮಾಡುವ ಎಲ್ಲಾ ವಿಧಿಗಳೂ ನಿಮಗೆ ಅನ್ವಯಿಸಲಿದೆ.

## ಮುಸ್ಲಿಮೇತರರು ಮಸೀದಿಗೆ ಪ್ರವೇಶಿಸುವುದು

*ಪ್ರ: ಇಸ್ಲಾಮಿನ ಬಗ್ಗೆ ತಿಳಿದುಕೊಳ್ಳುವ ಉದ್ದೇಶದಿಂದ ಮುಸ್ಲಿಮೇತರರು ಮಸೀದಿಯೊಳಗೆ ಪ್ರವೇಶಿಸಬಹುದೇ?*

ಉ: ಮುಸ್ಲಿಮರ ಯಾವುದೇ ಮಸೀದಿಗೂ ಅಮುಸ್ಲಿಮರು ಪ್ರವೇಶಿಸಬಹುದಾಗಿದೆ. ಆದರೆ ಮಕ್ಕಾದ ಮಸ್ಜಿದುಲ್ ಹರಮ್‌ಗೆ ಪ್ರವೇಶಿಸುವಂತಿಲ್ಲ. ಕುರ್‌ಆನ್‌ನ ತೌಬಾ ಅಧ್ಯಾಯದಲ್ಲಿ ಇದರ ಕಾರಣವನ್ನು ಅಲ್ಲಾಹು ಸ್ಪಷ್ಟ ಪಡಿಸಿದ್ದಾನೆ.

ನಜ್ರಾನ್ ಪ್ರದೇಶದ ಕ್ರೈಸ್ತರ ನಿಯೋಗವೊಂದಕ್ಕೆ ಪ್ರವಾದಿ(ಸ)ರವರು ಇಸ್ಲಾಮ್ ಧರ್ಮದ ಕುರಿತು ಸ್ಥೂಲವಾಗಿ ವಿವರಿಸಿಕೊಟ್ಟರಲ್ಲದೆ ಉತ್ತಮವಾದ ರೀತಿಯಲ್ಲಿ ಅವರೊಂದಿಗೆ ಸಂವಾದ ನಡೆಸಿದ ವಿಚಾರ ಹದೀಸ್‌ಗಳಲ್ಲಿ ಸ್ಥಿರಪಟ್ಟಿದೆ. ಇದು ನಡೆದದ್ದು ಪ್ರವಾದಿ(ಸ)ರವರ ಮಸೀದಿಯಾದ ಮಸ್ಜಿದುನ್ನಬವಿಯಲ್ಲಿ. ಮಸೀದಿಗೆ ಬರುವ ಮುಸ್ಲಿಮೇತರರು ಮಸೀದಿಯ ಶಿಷ್ಟಾಚಾರ ಮತ್ತು ಗೌರವಾದರ ಪಾಲಿಸಲು ಬಾಧ್ಯಸ್ಥರಾಗಿದ್ದಾರೆ.

**-ಶೈಖ್ ಅಬ್ದುಲ್ಲ ಸುಲೈಮಾನ್ ಮನೀಅ್**

## ಅಕ್ಕನನ್ನು ಬಿಟ್ಟು ತಂಗಿಗೆ ವಿವಾಹ ಮಾಡಿಸುವುದು

*ಪ್ರ: ಹಿರಿಯ ಸಹೋದರಿ(ಅಕ್ಕ)ಯ ವಿವಾಹ ನಡೆಸಲಿಕ್ಕಾಗಿ ಕಿರಿಯ ಸಹೋದರಿ (ತಂಗಿ)ಯ ವಿವಾಹ ಮುಂದೂಡುವುದರ ವಿಧಿ ಏನು? ತಂಗಿಗೆ ವಿವಾಹ ಅನ್ವೇಷಣೆ ಬರುವಾಗ ಮೊದಲು ಅವಳ ಹಿರಿಯ ಸಹೋದರಿಯ ವಿವಾಹ ಕರ್ಮ ನಡೆಯಲಿ ಎಂದು ಕಿರಿಯವಳ ವಿವಾಹಕ್ಕೆ ಅಡ್ಡಿ ಪಡಿಸುವುದು ಸರಿಯೇ? ಇದು ಇಸ್ಲಾಮಿನ ರೀತಿಯೇ?*

ಉ: ಕಿರಿಯ ಪುತ್ರಿಗೆ ವಿವಾಹ ಪ್ರಸ್ತಾಪ ಕೂಡಿ ಬರುವಾಗ ಮೊದಲು ಹಿರಿಯ ಪುತ್ರಿಯ ಮದುವೆ ನಡೆಯಲಿ ಎನ್ನುತ್ತಾ ಕಿರಿಯವಳ ವಿವಾಹ ಮುಂದೂಡುವುದು ನಮ್ಮ ಊರಿನಲ್ಲಿ ಕಂಡು ಬರುವ ಒಂದು ಸಂಪ್ರದಾಯ ಮಾತ್ರವಾಗಿದೆ. ಶರಅ್‌ನಲ್ಲಿ ಇದಕ್ಕೆ ಯಾವುದೇ ಆಧಾರವಿಲ್ಲ. ಕಿರಿಯ ಸಹೋದರಿಯನ್ನು ಬೇಗನೇ ಮದುವೆ ಮಾಡಿಸಿದರೆ ಅದು ಹಿರಿಯ ಸಹೋದರಿಗೆ ತೊಡಕಾಗಿ ಪರಿಣಮಿಸುವುದು ಎಂಬ ತಪ್ಪು ಕಲ್ಪನೆಯೇ ಇದಕ್ಕೆ ಕಾರಣ. ಇದು ಸರಿಯಲ್ಲ.

**-ಶೈಖ್ ಸಾಲಿಹ್ ಫೌಝಾನ್**

## ಮಸೀದಿಯ ಧ್ವನಿವರ್ಧಕವನ್ನು ಅನ್ಯ ಕಾರ್ಯಗಳಿಗೆ ಬಳಸುವುದು

*ಪ್ರ: ನಮ್ಮ ಗ್ರಾಮದಲ್ಲಿ ಒಂದು ಮಸೀದಿ ಇದೆ. ಅಲ್ಲಿನ ಧ್ವನಿವರ್ಧಕವನ್ನು ಊರಿನಲ್ಲಿ ಕಳ್ಳತನ ನಡೆದರೆ ಅಥವಾ ಯಾವುದಾದರೂ ವ್ಯಕ್ತಿಯ ಬಗ್ಗೆ ತಿಳಿಸಲು, ಊರಿನಲ್ಲಿ ನಡೆಯುವ ಉತ್ಸವ ಮುಂತಾದವುಗಳಿಗೆಲ್ಲಾ ಬಳಸಲಾಗುತ್ತದೆ. ಇದರ ಧಾರ್ಮಿಕ ವಿಧಿಯೇನು?*

ಉ: ಮಸೀದಿಗೆ ಸೀಮಿತವಾದುದನ್ನು ಮಸೀದಿಗಾಗಿ ಮಾತ್ರ ಉಪಯೋಗಿಸಬೇಕೆನ್ನುವುದೇ ನಮ್ಮ ಅಭಿಮತ. ಮಸೀದಿಯ ಧ್ವನಿವರ್ಧಕ ಆದ್ಸಾನ್, ಇಕಾಮತ್, ಜುಮುಅ ಖುತುಬ, ಧಾರ್ಮಿಕ ಉಪನ್ಯಾಸ ಮುಂತಾದವುಗಳಿಗೆ ಮಾತ್ರ ಬಳಸತಕ್ಕದ್ದು. ಇವುಗಳಿಗೆ ಹೊರತಾದ ಇತರ ಕಾರ್ಯ ಚಟುವಟಿಕೆಗಳಿಗೆ ಅದನ್ನು ಬಳಸುವಂತಿಲ್ಲ.

**-ಶೈಖ್ ಸಾಲಿಹ್ ಉಸೈಮೀನ್**

# ಧರ್ಮನಿಷ್ಠ ಖಲೀಫರು

(4ನೇ ಪುಟದಿಂದ)

ವಿದ್ವಾಂಸರೂ ನ್ಯಾಯ ಶಾಸ್ತ್ರಜ್ಞರೂ ಆಗಿದ್ದರು. ಪ್ರವಾದಿ(ಸ)ರಿಗೆ ಕುರ್‌ಆನ್ ಅವತೀರ್ಣಗೊಳ್ಳುತ್ತಿದ್ದಾಗ ಅದನ್ನು ಬರೆದಿಡುತ್ತಿದ್ದ ಝೈದ್‌ಬ್‌ನು ಸಾಬಿತ್(ರ)ರವರು ಮದೀನಾದ ಖಾಝಿಯಾಗಿದ್ದರು. ಕೂಫಾದಲ್ಲಿ ಅಬ್ದುಲ್ಲಾಹಿಬ್‌ನು ಮಸೂದ್ ಮತ್ತು ಶುರೈಹ(ರ) ಎಂಬಿಬ್ಬರು ಖಾಝಿಗಳಿದ್ದರು. ಸಲ್ಮಾನ್‌ಬ್‌ನು ರಬೀ, ಅಬ್ದುಲ್ ರಹ್ಮಾನ್‌ಬ್‌ನು ರಬೀ, ಇಮ್ರಾನ್‌ಬ್‌ನು ಹಾಸಿನ್, ಅಬೂಮುರ್ಯಮ್, ಜಮೀಲ್‌ಬ್‌ನುಲ್ ಉಮರ್(ರ) ಮುಂತಾದವರು ಖಲೀಫಾ ಉಮರ್(ರ)ರವರ ಕಾಲದ ಖಾಝಿಗಳಾಗಿದ್ದರು. ಖಾಝಿಗಳು ನಿಷ್ಪಕ್ಷಪಾತಿಗಳಾಗಿರಬೇಕು ಮತ್ತು ಶಾಸಕ ಮಂಡಳಿಯಿಂದ ಸಂಪೂರ್ಣ ಮುಕ್ತರಾಗಿರಬೇಕೆಂದು ಉಮರ್(ರ)ರವರ ಸರಕಾರ ಸ್ಪಷ್ಟ ಆದೇಶ ನೀಡಿತ್ತು.

ಖಲೀಫಾ ಉಮರ್(ರ) ಮತ್ತು ಉಬಯ್ಯುಬ್‌ನು ಕಅ್‌ಬ್‌ರ ಮಧ್ಯೆ ಉಂಟಾದ ವಿವಾದವೊಂದರ ಕುರಿತು ಉಮರ್(ರ)ರವರು ಝೈದ್‌ಬ್‌ನು ಸಾಬಿತ್‌ರವರ ನ್ಯಾಯಾಲಯಕ್ಕೆ ದೂರು ಸಲ್ಲಿಸಿದ್ದರು. ಪ್ರಕರಣದ ತನಿಖೆಗಾಗಿ ಉಮರ್(ರ)ರವರು ನ್ಯಾಯಾಲಯಕ್ಕೆ ಹಾಜರಾದಾಗ ನ್ಯಾಯಾಧೀಶ ಝೈದ್‌ಬ್‌ನು ಸಾಬಿತ್(ರ)ರವರು ಖಲೀಫರ ಗೌರವಾರ್ಥ ಎದ್ದು ನಿಂತರು. ಅದನ್ನು ಕಂಡ ಉಮರ್(ರ)ರವರು "ನಿಮ್ಮ ಈ ವರ್ತನೆಯು ನ್ಯಾಯಕ್ಕೆ ವಿರುದ್ಧವಾಗಿದೆ" ಎಂದರು. ಫಿರ್ಯಾದಿದಾರ ಉಮರ್(ರ)ರವರು ಒಬ್ಬ ಸಾಮಾನ್ಯ ಮನುಷ್ಯನಂತೆ ಕುಳಿತುಕೊಂಡಿದ್ದರು. ಈ ಪ್ರಕರಣದ ವಿಚಾರಣೆಗೆ ಮೊದಲು ಉಮರ್(ರ)ರವರು ಪ್ರಮಾಣ ವಚನ ಪರಿಸಬೇಕೆಂದು ಉಬಯ್ಯ್(ರ)ರವರು ಹೇಳಿದಾಗ, ಉಮರ್(ರ)ರವರು ಗೌರವಸ್ಥರಾಗಿರುವುದರಿಂದ ಪ್ರಮಾಣ ವಚನ ಮಾಡಬೇಕೆಂಬ ಪ್ರಸ್ತಾಪವನ್ನು ನ್ಯಾಯಾಧೀಶ ಝೈದ್‌ಬ್‌ನು ಸಾಬಿತ್(ರ) ಒಪ್ಪಲಿಲ್ಲ. ತಕ್ಷಣವೇ ಉಮರ್(ರ) ಹೇಳಿದರು: "ನೀವು ನ್ಯಾಯಾಧೀಶರಾಗಿದ್ದೀರಿ, ನಿಮ್ಮ ಮುಂದೆ ಈ ಉಮರ್ ಒಬ್ಬ ಸಾಮಾನ್ಯ ಮನುಷ್ಯನಿಗೆ ಸಮಾನವಾಗಿದ್ದಾನೆ. ಅಂತಹ ಒಂದು ಸಂದರ್ಭವನ್ನು ನೀವು ಒದಗಿಸುವ ತನಕ ನೀವು ಒಬ್ಬ ನ್ಯಾಯವಂತ ಖಾಝಿ ಆಗಲಾರಿರಿ".

ಉಮರ್(ರ)ರವರೇ ಸ್ವತಃ ಒಬ್ಬ ನ್ಯಾಯಾಧೀಶರಾಗಿದ್ದರು. ಅವರು ಅದಾಲತ್ ನಡೆಸುತ್ತಿದ್ದರು. ಕೆಲವು ವಿಶೇಷ ಪ್ರಕರಣಗಳಲ್ಲಿ ಅವರು ಮುಖ್ಯ ನ್ಯಾಯಾಧೀಶರಾಗಿ ತೀರ್ಪು ನೀಡುತ್ತಿದ್ದರು. ಒಮ್ಮೆ ತನ್ನ ಮಗ ಅಬೂ ಶಾಮಾ ಮದ್ಯಪಾನ ಮಾಡಿದ್ದಕ್ಕಾಗಿ ಅವರು ಶರೀಅತ್ ಕಾನೂನಿನನ್ವಯ 80 ಛಡಿಯೇಟಿನ ಶಿಕ್ಷೆ ವಿಧಿಸಿದರು. ಆ ಶಿಕ್ಷೆಯನ್ನು ಸಹಿಸಲಾರದೆ ಅಬೂಶಾಮಾ ಮೃತ್ಯುವಶರಾದರು. ಇಂತಹ ಅನೇಕ ಪ್ರಕರಣಗಳು ಅವರ ಕಾಲದಲ್ಲಿ ಇಸ್ಲಾಮಿನ ನ್ಯಾಯಾಂಗ ವ್ಯವಸ್ಥೆಯ ಘನತೆಯನ್ನು ಎತ್ತಿ ಹಿಡಿದಿತ್ತು. ನ್ಯಾಯ ಪಾಲನೆಯಲ್ಲಿ ಮುಸ್ಲಿಮರು, ಮುಸ್ಲಿಮೇತರರು ಎಂಬ ತಾರತಮ್ಯ ತೋರಿಸದೆ ಎಲ್ಲರನ್ನೂ ಸಮಾನವಾಗಿ ಕಾಣಲಾಗುತ್ತಿತ್ತು. ಒಮ್ಮೆ ಮುಸ್ಲಿಮನೊಬ್ಬ ಕ್ರೈಸ್ತನೊಬ್ಬನನ್ನು ಕೊಂದದ್ದಕ್ಕಾಗಿ ಉಮರ್(ರ)ರವರು ಕೊಲೆಗಾರ ಮುಸ್ಲಿಮನಿಗೆ ಮರಣ ದಂಡನೆ ವಿಧಿಸಿದ್ದರು.

# سلسلة الأحاديث الضعيفة والموضوعة

# ದುರ್ಬಲ ಮತ್ತು ಕೃತಕ ಹದೀಸ್‌ಗಳು



# ಒಂದು ಅವಲೋಕನ ಭಾಗ -46

ಎಂ.ಇ. ಅಶ್ರಫ್ ಮುಸ್ಲಿಯಾರ್
ಕಾಸರಗೋಡು

## ಪ್ರವಾದಿ(ಸ)ರವರ ಖಬ್ರ್ ಮತ್ತು ರೌದ, ಅಂತರ ತಿಳಿಯದ ಮೂಢರ ಗಮನಕ್ಕೆ...

ಅನೇಕ ಮಂದಿಯ ಪಾಲಿಗೆ ಹಜ್ಜ್ ಎಂದರೆ ಅದು ಮದೀನದಲ್ಲಿರುವ ರೌದಾ ಶರೀಫ್ ಸಂದರ್ಶನ, ರೌದ ಎಂದರೆ ಪ್ರವಾದಿ (ಸ) ಅವರ ಖಬ್ರ್ ಎಂಬುದು ಜನ ಸಾಮನ್ಯರ ಕಲ್ಪನೆ. ಆದುದರಿಂದಲೇ ಇರಬೇಕು ಪುರೋಹಿತರು ಪ್ರಾರ್ಥನೆಯಲ್ಲಿ ' ರೌದ' ಸಂದರ್ಶನದ ಭಾಗ್ಯ ಕರುಣಿಸುವಂತೆ ಅಲ್ಲಾಹನೊಂದಿಗೆ ಮೊರೆಯಿಡುತ್ತಾರೆ. ನಮಾಝ್‌ನ ಬಳಿಕ ಮತ್ತು ದರ್ಗಾಗಳ ಬಳಿ ಹೀಗೆ ಪ್ರಾರ್ಥಿಸುವುದು ಸಾಮಾನ್ಯ. ಹಜ್ಜ್‌ಗೆ ತೆರಳುವ ಸುನ್ನಿ ವ್ಯಕ್ತಿಯೊಡನೆ ಆತನ ಕುಟುಂಬ ಮಾಡುವ ಮೊದಲ ವಿಜ್ಞಾಪನೆ, "ನೀನು ನಮಗಾಗಿ ಪ್ರವಾದಿ(ಸ) ಅವರ 'ರೌದ ಶರೀಫ್'ನ ಬಳಿ ಪ್ರಾರ್ಥಿಸಬೇಕು. ಆ ಪವಿತ್ರ ರೌದದಲ್ಲಿ ಮಲಗಿರುವ ನೆಬಿವರ್ಯರಿಗೆ ನಮ್ಮ ಸಲಾಂ ತಿಳಿಸಬೇಕು" ಎಂಬಿತ್ಯಾದಿ ವಸಿಯ್ಯತ್‌ಗಳಾಗಿವೆ.

' ರೌದ' ಎಂದರೇನು ಎಂಬುದನ್ನು ವಿವರಿಸುವ ಮೊದಲು ಪ್ರವಾದಿ(ಸ) ಅವರ ಸಮಾಧಿ ಸಂದರ್ಶಿಸುವುದರ ಮಹತ್ವವನ್ನು ಸಾರುವ ಹದೀಸ್‌ಗಳ ನಿಜಸ್ಥಿತಿ ಅರಿಯೋಣ,

1. ಒಬ್ಬ ಕಅ್‌ಬ ಮಂದಿರಕ್ಕೆ ತೆರಳಿ ಹಜ್ಜ್ ನಿರ್ವಹಿಸಿ ನನ್ನನ್ನು ಸಂದರ್ಶಿಸದೆ ಹಿಂತಿರುಗಿದರೆ ಆತ ನನ್ನೊಂದಿಗೆ ಜಗಳ ಮಾಡಿದಂತೆಯೇ ಸರಿ(ದಾರಕುತ್ನಿ, ಇಬ್ನು ಅದಿಯ್ಯ್)

ಈ ಹದೀಸ್ ದುರ್ಬಲ ಮಾತ್ರವಲ್ಲ, ಕೃತಕ ನಿರ್ಮಿತ ಕೂಡಾ. ಇದರ ಸನದ್‌ನಲ್ಲಿರುವ ಮುಹಮ್ಮದ್ ಬಿನ್ ನುಅ್‌ಮಾನ್ ಅಶ್ಶಿಬ್‌ಲಿ ಈ ಹದೀಸನ್ನು ತಮ್ಮ ತಂದೆಯಿಂದ ವರದಿ ಮಾಡಿದ್ದಾರೆ. ತಂದೆ, ಮಗ ಇಬ್ಬರೂ ಅತೀ ದುರ್ಬಲರಾಗಿದ್ದಾರೆ. ಇಮಾಂ ಬೈಹಕಿ ಈ ಹದೀಸನ್ನು ವರದಿ ಮಾಡಿದ ಬೆನ್ನಿಗೇ ಇದರ ಸನದ್ ಅಜ್ಞಾತವಾಗಿದೆ ಎಂದು ಹೇಳಿದ್ದಾರೆ.

2. ನನ್ನ ನಿಧನದ ನಂತರ ಯಾರಾದರೂ ನನ್ನನ್ನು ಭೇಟಿಯಾದರೆ ಅವರು ನನ್ನನ್ನು ಬದುಕಿರುವಾಗಲೇ ಭೇಟಿಯಾದಂತೆ (ಮುಸ್ನದ್ ಅಬೀಯಅ್‌ಲ, ದಾರಕುತ್ನಿ)

ಇದು ಕೂಡಾ ಕೃತಕ ಹದೀಸ್. ಏಕೆಂದರೆ ಇದರ ಪರಂಪರೆಯಲ್ಲಿ ಅಜ್ಞಾತ ವರದಿಗಾರರಿದ್ದಾರೆ.

3. ಲ್ಲಾಹನ ಪ್ರತಿಫಲಾಪೇಕ್ಷೆಯೊಂ ದಿಗೆ ಮದೀನಕ್ಕೆ ಬಂದು ನನ್ನನ್ನು ಸಂದರ್ಶಿಸುವವರಿಗೆ ಅಂತ್ಯ ದಿನದಲ್ಲಿ ನಾನು ಶಫಾಅತ್ ಮಾಡುವೆನು. ಮತ್ತು ಅವರ ಪರವಾಗಿ ಸಾಕ್ಷಿ ನಿಲ್ಲುವೆನು(ವರದಿ:ಅನಸ್(ರ)ಅವರಿಂದ)

ಈ ಹದೀಸನ್ನು ಅನಸ್(ರ)ರವರು ಪ್ರವಾದಿ(ಸ) ಅವರಿಂದ ಉಲ್ಲೇಖಿಸಿದ್ದಾಗಿ ಪ್ರಚುರಪಡಿಸಲಾಗುತ್ತದೆ, ಇದರ ಸನದ್‌ನಲ್ಲಿ ಸುಲೈಮಾನ್ ಬಿನ್ ಝೈದ್ ಅಲ್ ಕಅ್‌ಬಿ ಎಂಬ ವ್ಯಕ್ತಿ ಇದ್ದಾರೆ. ಇವರು ದುರ್ಬಲರಾಗಿದ್ದಾರೆ ಎಂದು ಶೈಖ್ ಇಬ್ನ್ ಬಾಝ್ ಪ್ರಸ್ತಾಪಿಸಿದ್ದಾರೆ.

ಪ್ರವಾದಿ(ಸ) ಅವರ ಖಬ್ರ್ ಸಂದರ್ಶನಕ್ಕೆ ವಿಶೇಷ ಮಹತ್ವ ಕಲ್ಪಿಸಿ ವರದಿಯಾಗಿರುವ ಸರ್ವ ಹದೀಸ್‌ಗಳೂ ದುರ್ಬಲವಾಗಿವೆ ಎಂದು ಇಬ್ನು ತೀಮಿಯ ಹೇಳತ್ತಾರೆ.

ಮಕ್ಕಕ್ಕೆ ಹೋಗುವವರು ಮದೀನಕ್ಕೆ ಹೋಗಬಾರದೆಂದು ಸಲಫಿಗಳು ಎಲ್ಲೂ ಹೇಳಿರುವುದಿಲ್ಲ. ಮಸ್ಜಿದುನ್ನಬವಿಯಲ್ಲಿ ನಮಾಝ್ ಮಾಡುವ ಉದ್ದೇಶದೊಂದಿಗೆ ಮದೀನಕ್ಕೆ ಹೋದಾಗ ಪ್ರವಾದಿ(ಸ) ಅವರ ಖಬ್ರ್ ಝಿಯಾರತ್ ಮಾಡುವುದು ಸುನ್ನತ್ ಆಗಿದೆ, ಆದರೆ ಇಮಾಂ ನವವಿ ಇಬ್ನು ಹಜರ್ ಮುಂತಾದವರು ತಮ್ಮ ಗ್ರಂಥಗಳಲ್ಲಿ ಹೇಳರುವಂತೆ ಸಮಾಧಿಯನ್ನು ಚುಂಬಿಸಬಾರದು, ಪ್ರವಾದಿ ಅವರೊಂದಿಗೆ ಪ್ರಾರ್ಥಿಸಬಾರದು, ಸಹಾಯ ಯಾಚಿಸಬಾರದು, ಅತ್ಯಂತ ಶಿಷ್ಟಾಚಾರದಿಂದ ದೂರ ನಿಂತು ಸಲಾತ್-ಸಲಾಂ ಹೇಳಬೇಕು. ಇದು ನಾವು ಆ ಮಹಾನ್‌ಪ್ರವಾದಿ(ಸ) ಅವರಿಗೆ ಸಲ್ಲಿಸುವ ಗೌರವಾರ್ಪಣೆ.

ರೌದ ಎಂದರೇನು? ಅದು ಪ್ರವಾದಿ(ಸ) ಅವರು ದಫನಗೊಂಡಿರುವ ಖಬ್ರ್‌ನ ಹೆಸರೇ? ಅಥವಾ ' ರೌದ' ಎಂಬುದೊಂದು ಪ್ರತ್ಯೇಕ ಸ್ಥಳವಿದೆಯೇ?ಎಂಬ ಬಗ್ಗೆ ತಿಳಿಯೋಣ.

ಪ್ರವಾದಿ(ಸ) ಅವರು ಹೇಳತ್ತಾರೆ " ನನ್ನ ಮನೆ ಮತ್ತು ಮಿಂಬರಿನ ಮಧ್ಯೆ ಇರುವ ಸ್ಥಳ ಸ್ವರ್ಗದ ಹೂದೋಟವಾಗಿದೆ. (ಬುಖಾರಿ 1196), (ಮುಸ್ಲಿಮ್ 1391) ಈ ಹದೀಸ್ ವರದಿ ಮಾಡಿದ್ದಾರೆ. ಹದೀಸ್‌ನ ಅರಬಿ ಮೂಲ "ಮಾಬೈನ ಬೈತೀ ವಮಿಂಬರೀ ರೌದತುನ್ ಮಿನ್ ರಿಯಾದಿಲ್ ಜನ್ನತ್" ಎಂದಾಗಿದೆ. ಇದನ್ನು ಚೆನ್ನಾಗಿ ಗಮನಿಸಬೇಕು. (ಏಕೆಂದರೆ ಮಾಬೈನ ಖಬ್ರೀ ವ ಮಿಂಬರೀ...ಎಂಬ ದುರ್ಬಲ ವರದಿ ಭಾರೀ ಪ್ರಚಾರದಲ್ಲಿದೆ) ಪ್ರವಾದಿ(ಸ) ಅವರು ಹೀಗೆ ಹೇಳಬೇಕಾದರೆ ಅವರ ಜೀವಿತ ಕಾಲದಲ್ಲೇ 'ರೌದಾ' ಎಂಬ ಸ್ಥಳ ಇತ್ತೆನ್ನುವುದು ದಿಟ. ಈ ಸ್ಥಳ 'ರೌದ' ಎನಿಸಲು ಕಾರಣವೂ ಇದೆ.

ಪ್ರವಾದಿ(ಸ) ಅವರು ಅಲ್ಲಾಹನಿಂದ ದೊರೆತ ವಹ್ಯ್ ಎಂಬ ದಿವ್ಯ ಸಂದಶೇವನ್ನು ಜನರಿಗೆ ಕಲಿಸಲು, ಜನರಿಗೆ ಇಮಾಮ್ ಆಗಿ ನಮಾಝ್ ನಿರ್ವಹಿಸಲು ನಿರಂತರವಾಗಿ ಉಪಯೋಗಿಸುತ್ತಿದ್ದ ಈ ಸ್ಥಳ ಅವರ ಮಿಂಬರ್ ಹಾಗೂ ಮನೆಯ ನಡುವಿನ ಸಂಪರ್ಕ ಸೇತು ಆಗಿತ್ತು. ಆದುದರಿಂದಲೇ ಪ್ರವಾದಿ(ಸ) ಅವರು ಈ ಸ್ಥಳಕ್ಕೆ ಪ್ರತ್ಯೇಕ ವಿಶೇಷತೆ ಕಲ್ಪಿಸಿ 'ರೌದ' ಎಂದು ನಾಮಕರಣ ಮಾಡಿದರು.

ಪ್ರಮಾದ ವಷಾತ್ ಮೇಲಿನ ಹದೀಸ್ "ಮಾಬೈನ ಖಬ್ರೀ ವ ಮಿಂಬರೀ" ಎಂದು ಇಬ್ನ್ ಅಸಾಕಿರ್(ರ) ಅವರ ವರದಿಯೊಂದರಲ್ಲಿ ಪ್ರಕಟವಾಗಿರುವ ಕಾರಣ ಅನೇಕ ವಿದ್ವಾಂಸರು ಇದನ್ನು ಪ್ರಯೋಗಿಸುತ್ತಾ ಬಂದಿದ್ದಾರೆ.

ಇಮಾಂ ನವವಿ(ರ) ಕೂಡಾ ಮಾಬೈನ ಖಬ್ರೀ ವ ಮಿಂಬರೀ (ನನ್ನ ಸಮಾಧಿ ಮತ್ತು ಮಿಂಬರ್‌ನ ಮಧ್ಯದ ಸ್ಥಳ) ಎಂಬ ಹದೀಸ್ ಇಮಾಂ ಬುಖಾರಿ ವರದಿ ಮಾಡಿದ್ದಾರೆ ಎಂದು ಅದ್ಸ್‌ಕಾರ್‌ನಲ್ಲಿ ಹೇಳಿದ್ದು ಅವರಿಗೆ ಸಂಭವಿಸಿದ ಪ್ರಮಾದವಾಗಿದೆ.

ಸಹೀಹ್ ಆದ ಯಾವುದೇ ಹದೀಸ್‌ನಲ್ಲೂ "ಖಬ್ರೀ" ಎಂಬ ಪದ ಬಳಕೆಯಾಗಿಲ್ಲ. ಅಂತಹ ವರದಿಯನ್ನು ವಿದ್ವಾಂಸರು ದಈಫ್ ಎಂದಿದ್ದಾರೆ. ಏಕೆಂದರೆ ಇದು ಅತ್ಯಧಿಕವಾಗಿ ಬಂದಿ ರುವ ವರದಿಗೆ ವಿರುದ್ದವಾಗಿದೆ, ಒಂದು ವೇಳೆ ಇದು ಸರಿಯಾಗಿದ್ದಲ್ಲಿ ಪ್ರವಾದಿ(ಸ) ಅವರು ನಿಧನ ಹೊಂದಿದಾಗ ಅವರನ್ನು ಎಲ್ಲಿ ದಫನಗೊಳಿಸಬೇಕು ಎಂಬ ಬಗ್ಗೆ ಸಹಾಬಿಗಳ ನಡುವೆ ಸುದೀರ್ಘ ಚರ್ಚೆ ನಡೆಯುತ್ತಿರಲಿಲ್ಲ. ಹೇಗೂ ರೌದ ಇದೆಯಲ್ಲ, ಅಲ್ಲೇದಫನಗೊಳಿಸೋಣ ಎಂಬ ತೀರ್ಮಾನಕ್ಕೆ ಬರುತ್ತಿದ್ದರು.

ಶೈಖುಲ್ ಇಸ್ಲಾಮ್ ಇಬ್( ತೀಮಿಯ್ಯ ಹೇಳುತ್ತಾರೆ " ನನ್ನ ಮನೆ ಮತ್ತು ಮಿಂಬರಿನ ನಡುವಿನ ಸ್ಥಳ ಸ್ವರ್ಗದ ಹೂ ಬನಗಳಲ್ಲೊಂದಾಗಿದೆ" ಎಂಬ ವರದಿಯೇ ಅತ್ಯಂತ ಅಧಿಕೃತ ಹಾಗೂ ಸಹೀಹ್ ಆಗಿ ಸ್ಥಿರ ಪಟ್ಟಿರುವುದು, ಪ್ರವಾದಿ(ಸ)ಅವರು ಈ ಮಾತನ್ನು ಹೇಳುವಾಗ ಸಮಾಧಿಸ್ಥರಾಗಿರಲಿಲ್ಲ. ಆದುದರಿಂದಲೇ ಸಹಾಬಿಗಳಲ್ಲಿ ಯಾರೂ ಕೂಡಾ ಪ್ರವಾದಿ(ಸ) ಅವರ ದಫನ ಸ್ಥಳ ನಿರ್ಣಯಿಸಲು ಮೇಲಿನ ಹದೀಸ್ ಅನ್ನು ಪುರಾವೆಯಾಗಿ ಮಂಡಿಸಲಿಲ್ಲ, (ಮಜ್‌ಮೂಉ ಫತಾವಾ)

ಕೆಲವರು 'ಖಬ್ರ್' ಎಂದು ವರದಿಯಾಗಿರುವ ಹದೀಸ್ ಅನ್ನು ಶಾಬ್ದಿಕವಾಗಿ ಭಿನ್ನವಾದರೂ ಆಶಯದ ದೃಷ್ಟಿಯಿಂದ ಸರಿ ಎನ್ನುತ್ತಾರೆ. ಕಾರಣ ಹದೀಸ್‌ನಲ್ಲಿ ಹೇಳಲಾದ ಪ್ರಸ್ತುತ ಮನೆಯಲ್ಲೇ ಅವರ 'ಖಬ್ರ್' ಸ್ಥಾಪಿಸಲಾಯಿತು. ಇಮಾಂ ಬುಖಾರಿ ಒಂದೆಡೆ 'ಖಬ್ರೀ'ಎಂಬ ತಲೆ ಬರಹ ನೀಡಿರುವುದೂ ಇದೇ ಅರ್ಥದಲ್ಲಿ ಎಂದು ಹಾಫಿದ್ ಇಬ್ನು ಹಜರುಲ್ ಅಸ್ಖಲಾನಿ ವಿವರಿಸಿದ್ದಾರೆ. (ಫತ್ಹುಲ್ ಬಾರಿ 3/70) )

ಪ್ರವಾದಿ(ಸ) ಅವರು ಹೇಳಿದ್ದಾಗಿ ವರದಿಯಾಗಿರುವ ಎಲ್ಲ ಸಹೀಹ್ ಆದ ಹದೀಸ್‌ಗಳಲ್ಲೂ 'ಬೈತ್' ಎಂಬ ಪದವೇ ಬಳಕೆಯಾಗಿದೆ. "ಖಬ್ರ್" ಎಂದು ಇಬ್ನ್ ಅಸಾಕಿರ್ ಅವರು ವರದಿ ಮಾಡಿರುವುದು ಅವರಿಗೆ ಸಂಭವಿಸಿದ ಪ್ರಮಾದವೆಂದು ಇಬ್ನ್ ಹಜರ್ ಹೇಳುತ್ತಾರೆ.ಇನ್ನು ಆ ಸ್ಥಳ 'ಸ್ವರ್ಗದ ಹೂ ಬನ' ಅಥವಾ ರೌದ ಆಗಿದೆ ಎಂದರೇನು? ಇದಕ್ಕೆ ವಿದ್ವಾಂಸರು ನೀಡುವ ವ್ಯಾಖ್ಯಾನ ಹೀಗಿದೆ.

1. ಈ ಸ್ಥಳದಲ್ಲಿ ಪ್ರಾರ್ಥನಾ ನಿರತರಾಗಿ ಕೂರುವವರಿಗೆ ಸಿಗುವ ಶಾಂತಿ ಸಮಾಧಾನ ಹಾಗೂ ಯಶಸ್ಸು ಸ್ವರ್ಗ ಲೋಕದಲ್ಲಿ ಸಿಗಲಿರುವ ನೆಮ್ಮದಿಯ ಸಾಂಕೇತಿಕ ನಿದರ್ಶನವಾಗಿದೆ.
2. ಈ ಸ್ಥಳದಲ್ಲಿ ನಿರ್ವಹಿಸಲ್ಪಡುವ ಆರಾಧನೆ ಸ್ವರ್ಗಕ್ಕೆ ಹೋಗಲು ಕಾರಣವಾಗಲಿದೆ. ಇಬ್ನ್ ಹಝ್ಮ್(ರ) ಅವರು ಈ ಅಭಿಪ್ರಾಯವನ್ನು ಆಯ್ಕೆ ಮಾಡಿದ್ದಾರೆ.
3. ಪ್ರವಾದಿ(ಸ) ಅವರ ಪ್ರಸ್ತುತ ಮನೆ ಹಾಗೂ ಮಿಂಬರಿನ ನಡುವಿನ ಸ್ಥಳ ಪರಲೋಕದಲ್ಲಿ ವಾಸ್ತವಿಕವಾಗಿಯೇ ಸ್ವರ್ಗದ ಭಾಗವಾಗಲಿದೆ.

ಪ್ರಸ್ತುತ ಮನೆ ಮತ್ತು ಮಿಂಬರಿನ ಮಧ್ಯೆ ಇರುವ ಸ್ಥಳವನ್ನು ಅಲ್ಲಾಹು ಸ್ವರ್ಗವಾಗಿ ಮಾರ್ಪಡಿಸಲಿದ್ದಾನೆ. ಎಂದು ಇಬ್ನ್ ಅಬ್ದುಲ್ ಬರ್(ರ) ಎಂಬವರು ಹೇಳತ್ತಾರೆ.

ಮನೆ ಮತ್ತು ಮಿಂಬರಿನ ನಡುವೆ ಇರುವ ಜಾಗವನ್ನು ಅಂತ್ಯದಿನದಲ್ಲಿ ಅಲ್ಲಾಹು ಸ್ವರ್ಗ ಲೋಕಕ್ಕೆ ಎತ್ತರಿಸಲಿದ್ದಾನೆ ಎಂದು ಹೇಳಿದವರಿದ್ದಾರೆ.

ಕೊನೆಯದಾಗಿ ಹೇಳುವುದೇನೆಂದರೆ 'ರೌದಾ' ಎಂಬುದು ಪ್ರವಾದಿ(ಸ) ಅವರ ಸಮಾಧಿಯಲ್ಲ. ಎತ್ತರಿಸಿ ಕಟ್ಟಿರುವ ಹಸಿರು ಕುಬ್ಬವನ್ನು 'ರೌದ' ಎಂದು ಕರೆಯುವುದು ಮೂರ್ಖತನ, ಪ್ರವಾದಿ(ಸ) ಅವರ ಖಬ್ರ್ ಸಂದರ್ಶನ ಹಜ್ಜ್‌ನ ಭಾಗವಲ್ಲ. ಇಂದು ಹಜ್ಜ್‌ಗೆ ಹೋಗುವ ಬಹುತೇಕ ಸುನ್ನಿಗಳ ಉದ್ದೇಶ ಪ್ರವಾದಿ(ಸ) ಅವರ ಖಬ್ರ್ ಸಂದರ್ಶನವಾಗಿದೆ, ಹಜ್ಜ್ ಅಥವಾ ಉಮ್ರದ ಸಂದರ್ಭದಲ್ಲಿ ಪ್ರವಾದಿ(ಸ) ಅವರ ಸಮಾಧಿ ಸಂದರ್ಶನ ವಿಶೇಷ ಸುನ್ನತ್ ಇರುವುದಿಲ್ಲ ಎಂಬುದನ್ನು ತಿಳಿಯುವುದೊಳಿತು. ●

# ಮೂಢ ನಂಬಿಕೆಗಳು: ವಂಚಿತರಾಗಬೇಡಿ...!

ನಮ್ಮ ಸಮಾಜದಲ್ಲಿ ಬೇರೂರಿರುವ ಮೂಢನಂಬಿಕೆ ಮತ್ತು ತಪ್ಪು ಕಲ್ಪನೆಗಳಿಗೆ ಎಣೆ ಇಲ್ಲ. ಮುಸ್ಲಿಮರು ಎಂದು ಕರೆಸಿಕೊಳ್ಳುವ ನಾವು ಇಂತಹ ಅಧಾರ್ಮಿಕ ನಂಬಿಕೆಗಳನ್ನು ಸಂಪೂರ್ಣ ತೊರೆಯುವ ತನಕ ಯಥಾರ್ಥ ಮುಸ್ಲಿಮರಾಗಲು ಖಂಡಿತವಾಗಿಯೂ ಸಾಧ್ಯವಿಲ್ಲ.

ಇಲ್ಲಿರುವ ಬಹುತೇಕ ಮೂಢನಂಬಿಕೆಗಳು ಬಹು ಹಿಂದಿನಿಂದಲೂ ಮುಸ್ಲಿಮೇತರರಲ್ಲಿ ಪ್ರಚಲಿತವಾಗಿದ್ದು ಕಾಲ ಕ್ರಮೇಣ ಅವು ಮುಸ್ಲಿಮರ ವಿಶ್ವಾಸ ಮತ್ತು ಆಚಾರಗಳ ಮೇಲೆ ಪ್ರಭಾವ ಬೀರಿರುವುದನ್ನು ತಳ್ಳಿ ಹಾಕುವಂತಿಲ್ಲ. ಅಂತಹ ಕೆಲವು ಕಂದಾಚಾರ ಮತ್ತು ಮೂಢ ನಂಬಿಕೆಗಳ ಒಂದು ಸಂಕ್ಷಿಪ್ತ ವಿವರಣೆಯೇ ಈ ಬರಹದ ಉದ್ದೇಶ.

ನಮ್ಮ ಸಮಾಜದಲ್ಲಿ ಮಗುವೊಂದು ಹುಟ್ಟಿದಾಗಲೇ ಮೂಢನಂಬಿಕೆ ಗರಿಬಿಚ್ಚಿಕೊಳ್ಳುತ್ತದೆ. ನವಜಾತ ಶಿಶುವನ್ನು ದರ್ಗಾಗಳಿಗೆ ಕೊಂಡೊಯ್ದು ಗೋರಿಯ ಚಾದರವನ್ನು ಅದರ ತಲೆಗೆ ಒರೆಸಿದರೆ ಆ ಮಗು ವಿಪತ್ತುಗಳಿಂದ ರಕ್ಷಣೆ ಹೊಂದುವುದು. ಕಣ್ಣ ದೃಷ್ಟಿ, ಪಿಶಾಚಿ ಬಾಧೆ ಮುಂತಾದವುಗಳಿಂದ ಮಗುವಿಗೆ ಶೀರಕ್ಷೆ ದೊರೆಯುವುದೆಂಬ ನಂಬಿಕೆ. ಇದು ಅಪ್ಪಟ ಶಿರ್ಕ್ ಭರಿತ ವಿಶ್ವಾಸವಾಗಿದೆ.

ಮಗುವಿಗೆ ದರ್ಗಾದ ವಲಿಯ್ಯ್‌ನ ಹೆಸರಿಟ್ಟರೆ ಆ ವಲಿಯ್ಯ್‌ನ ಬರ್ಕತ್‌ನಿಂದ ಮಗು ಸಜ್ಜನನಾಗಿ ಬೆಳೆಯುತ್ತಾನೆ ಎಂಬ ನಂಬಿಕೆಯಿಂದ ಸ್ಥಳೀಯ ಸಮಾಧಿಸ್ಥರಾದ ಅಸ್ರಾರುದ್ದೀನ್, ಇಬ್ರಾಹೀಮ್ ಬಾದ್‌ಶಾ, ಶಾಹುಲ್ ಹಮೀದ್, ದಾವೂದುಲ್ ಹಕೀಮ್, ಖಲಂದರ್ ಶಾ ಮುಂತಾದ ಹೆಸರುಗಳನ್ನು ಆಯ್ಕೆ ಮಾಡುವವರಿದ್ದಾರೆ.

ಮಗು ಶನಿವಾರ ಅಥವಾ ಮಂಗಳವಾರ ಹುಟ್ಟಿದರೆ ಹೆತ್ತವರಿಗೆ ನಿರಾಶಾಭಾವ. ಶುಕ್ರವಾರ ಬೆಳಿಗ್ಗೆ ಅಥವಾ ರಾತ್ರಿ ಹುಟ್ಟುವ ಮಗು ಅದೃಷ್ಟಶಾಲಿ. ಹುಟ್ಟುವಾಗಲೇ ಮಗುವಿನ ಅಂಗಾಂಗಗಳಲ್ಲಿ ಏರು ಪೇರಾಗಿದ್ದರೆ (ಉದಾ: ಆರು ಬೆರಳು, ಮೂರು ಕಾಲು, ಇಲ್ಲವೇ ಎರಡು ತಲೆ) ಆ ಮಗು ಮನೆಗೆ ಬರ್ಕತ್ ಎಂಬ ನಂಬಿಕೆ. ಮಕ್ಕಳಿಗೆ ಕನ್ನಡಿ ತೋರಿಸಬಾರದು. ಯಾಕೆಂದರೆ ಅದರಿಂದ ಅವರು ಮೂರ್ಖರಾಗುತ್ತಾರೆ ಎಂಬ ವಿಶ್ವಾಸ. ಮಗು ಮಲಗಿರುವಾಗ ಅದರ ಮೇಲೆ ಅಡ್ಡವಾಗಿ ದಾಟಿ ಹೋದರೆ ಮಗುವಿನ ಆಯುಷ್ಯ ಕಡಿಮೆಯಾಗುವುದಂತೆ. ಗರ್ಭಿಣಿ ಮಹಿಳೆಯರಿಗೆ ಸಂಬಂಧಿಸಿದಂತೆ ಪ್ರಚಲಿತವಿರುವ ಕೆಲವು ತಪ್ಪು ಕಲ್ಪನೆ ಹೀಗಿವೆ:

ಗರ್ಭಿಣಿ ಮಹಿಳೆಯರು ರಾತ್ರಿ ಕತ್ತಲಾದ ಬಳಿಕ ಮನೆ ಹೊರಗೆ ಹೋಗಬಾರದು. ಗರ್ಭಿಣಿ ಏನೇ ಕೇಳಿದರೂ ಸಾಮಾನ್ಯವಾಗಿ ಅದನ್ನು ಆಕೆಗೆ ನೀಡಲಾಗುತ್ತದೆ. ಇಲ್ಲವಾದಲ್ಲಿ ಗರ್ಭದಲ್ಲಿರುವ ಮಗುವಿಗೆ ರೋಗ ಬರುವುದೆಂಬ ವಿಶ್ವಾಸ.

ಸುಖ ಪ್ರಸವಕ್ಕಾಗಿ ಅಲ್ಲಾಹನಲ್ಲಿ ಪ್ರಾರ್ಥಿಸುವ ಬದಲು ತಂಙಳ್, ಬಾಬಾ, ಬೀವಿಗಳು ಮಂತ್ರಿಸಿ ನೀಡುವ ತಾಯಿತಗಳನ್ನು ಮೈ ಮೇಲೆ ಕಟ್ಟಿಕೊಳ್ಳುವುದು. ಇವೆಲ್ಲವೂ ಅಧಾರ್ಮಿಕ ಚಟುವಟಿಕೆಗಳಾಗಿವೆ.

**ಪ್ರಯಾಣಕ್ಕೆ ಸಂಬಂಧಿಸಿದ ಕೆಲವು ಮೂಢನಂಬಿಕೆಗಳು:**

ಅಂಗಾಲು ಚರ್ಮ ತುರಿಸಿದರೆ ಅದು ಸಂಖ್ಯೆಯನ್ನು ಬರೆದಿಡಲಾಗುತ್ತದೆ.

786 ಎಂಬ ಸಂಖ್ಯೆಯನ್ನು "ಬಿಸ್ಮಿ"ಗೆ ಪರ್ಯಾಯ ಎಂದು ನಂಬಿದವರಿದ್ದಾರೆ. ಈ ಸಂಖ್ಯೆಗೂ ಇಸ್ಲಾಮಿಗೂ ಯಾವುದೇ ಸಂಬಂಧವಿಲ್ಲ. ವಾಹನ-ಕಾರು ದಾಖಲಾತಿಗಳಲ್ಲಿ ಈ ಸಂಖ್ಯೆ ಸಿಗಲು ದುಬಾರಿ ಹಣ ವ್ಯಯಿಸುವವರಿದ್ದಾರೆ. ಎಂತಹ ಮೌಢ್ಯತನ...!

ಕನಸಿನ ಬಗ್ಗೆ ಮೂಢನಂಬಿಕೆಗಳು ಅಧಿಕ ಸಂಖ್ಯೆಯಲ್ಲಿದ್ದು ಏನನ್ನು ಕಂಡರೆ ಏನಾಗುತ್ತದೆ ಪ್ರಯಾಣ ಬೆಳೆಸಿ ಅಲ್ಲಿನ ಔಲಿಯಾಗಳಲ್ಲಿ ಕ್ಷೇಮಾಭಿವೃದ್ಧಿಗಾಗಿ ಪ್ರಾರ್ಥಿಸುವ ಮೂಲಕ ಕಾರನ್ನು ಚಾಲನೆಗೆ ಬಿಡುತ್ತಾರೆ.

ಧರಿಸಿದ ಬಟ್ಟೆಯಲ್ಲಿ ಮುಖ ಒರೆಸುವುದು, ಈರುಳ್ಳಿಯ ಸಿಪ್ಪೆಯನ್ನು ಸುಡುವುದು, ಮನೆಯ ಮೆಟ್ಟಲಿನಲ್ಲಿ ಕೂರುವುದು, ತಂದೆ-ತಾಯಿಗಳ ಮುಂದೆ ನಡೆಯುವುದು, ಕಟ್ಟಿ ಹಾಕಿದ ಲೇಖನಿಯಲ್ಲಿ ಬರೆಯುವುದು, ಧರಿಸಿದ ಬಟ್ಟೆಯನ್ನು ಅಲ್ಲೇ ಹೊಲಿಯುವುದು, ರಾತ್ರಿ

## ತೆಂಗಿನಮರದಲ್ಲಿ ಮಗುವಿನ ನಗು!

## ಪಿಶಾಚಿ ಕಾಟವೆಂದು ಮಂತ್ರವಾದಿ ಬಳಿ ಧಾವಿಸಿದ ಮನೆಮಂದಿ!

■ ಚಂದ್ರ ಕೆ. ಹೆಮ್ಮಾಡಿ

ರಾತ್ರಿಯಾಗುತ್ತಿದ್ದಂತೆ ಮನೆ ಹತ್ತಿರದ ತೆಂಗಿನ ಮರದಲ್ಲಿ ಮಗುವಿನ ನಗು ಕೇಳಿ ಇಡೀ ಕುಟುಂಬ ಬೆಚ್ಚಿಬಿತ್ತು. ದೈವ, ದೇವರಿಗೆ ಪ್ರಾರ್ಥಿಸಿದ ಬಳಿಕ ತಡರಾತ್ರಿಯಿಂದ ಕಡಿಮೆಯಾಗಿತ್ತು! ಮರುದಿನ ಮುಂಜಾವ ಊರಲ್ಲಿದ್ದ ಮಂತ್ರವಾದಿಯಲ್ಲಿಗೆ ಹೋಗಿ ಪ್ರಶ್ನೆ ಕೇಳಿದಾಗ ಅವರು ಕವಡೆ ಹಾಕಿ ನೋಡಿ ಸಮಸ್ಯೆ ಇರುವುದಾಗಿ ತಿಳಿಸಿದರು. ಅದಕ್ಕೊಂದು ಹೋಮ ಮಾಡುವ ಪರಿಹಾರೋಪಾಯವನ್ನೂ ಸೂಚಿಸಿದರು. ಮೊದಲೇ ಬೆದರಿದ್ದ ಕುಟುಂಬ ಅದೆಲ್ಲವನ್ನೂ ನೆರವೇರಿಸಿದರು...

[illegible]



[illegible]

ಮುಂಬ ರುವ ಪ್ರಯಾಣದ ಸೂಚನೆ. ಮನೆಯಿಂದ ಹೊರಟಾಗ ಯಾರಾದರೂ "ಎಲ್ಲಿಗೆ?" ಎಂದು ಕೇಳಿದರೆ ಅದು ಪ್ರಯಾಣಕ್ಕೆ ಅಪಶಕುನ. ಪ್ರಯಾಣದ ಪ್ರಾರಂಭದಲ್ಲಿ ತುಂಬಿದ ಕೊಡವನ್ನು ಕಾಣುವುದು ಶುಭಕರ, ಪ್ರಯಾಣವನ್ನು ನಿರ್ಬಂಧಿಸುವ ಮತ್ತೊಂದು ಕಾರ್ಯ "ನಹ್ಸ್" ನೋಡುವಿಕೆ.

ಮಂಗಳವಾರ ಮತ್ತು ಶನಿವಾರ ಪ್ರಯಾಣ ಹೋಗುವುದನ್ನು ಅಪಶಕುನವಾಗಿ ಕಾಣುವವರಿದ್ದಾರೆ. ಸಂಖ್ಯೆಗೆ ಸಂಬಂಧಿಸಿದಂತೆ ಪ್ರಚಲಿತವಿರುವ ಮೂಢನಂಬಿಕೆಗಳು ವೈವಿಧ್ಯಮಯ "3" ಎಂಬುದು ಒಳ್ಳೆಯ ಸಂಖ್ಯೆಯಲ್ಲ ಎಂಬ ಕಲ್ಪನೆ ಹಲವರಲ್ಲಿದೆ. ಮೂವರು ಒಟ್ಟಾಗಿ ಯಾತ್ರೆ ಹೋಗುವುದನ್ನು ಇಷ್ಟ ಪಡುವುದಿಲ್ಲ.

313 ಎಂಬ ಸಂಖ್ಯೆ ಅನೇಕ ಮುಗ್ಧ ಮುಸ್ಲಿಮರ ಪಾಲಿಗೆ ಪೂಜನೀಯವಾಗಿದೆ. ಬದ್ರ್ ಯುದ್ಧದಲ್ಲಿ ಪಾಲ್ಗೊಂಡ 313 ಸಹಾಬಿಗಳ ಸಂಖ್ಯೆ ಇದಾಗಿದೆ ಎಂದು ತಮ್ಮ ಮನೆಯ ಕಿಟಿಕಿ, ವಾಹನದ ಗಾಜು ಇತ್ಯಾದಿ ಗಳಲ್ಲಿ ಈ ಎಂಬುದನ್ನು ತಿಳಿಸಲು ಪುರೋಹಿತರು ಅನೇಕ ಪುಸ್ತಕಗಳನ್ನು ಬರೆದಿದ್ದಾರೆ. ಹಾವಿನ ಕನಸು ಮಾಟದ ಸಂಕೇತ. ಮರಣ ಹೊಂದಿದಂತೆ ಕಂಡರೆ ಆಯುಷ್ಯ ಹೆಚ್ಚುವುದು. ಆಕಾಶದಲ್ಲಿ ಹಾರಿದಂತೆ ಕಾಣುವುದು ಮುಂಬರುವ ಮರಣದ ಸೂಚನೆ. ಬೆಳಗಿನ ಜಾವ ಬೀಳುವ ಕನಸುಗಳು ನಿಜವಾಗಿರುವುದಿಲ್ಲ ಎಂಬ ನಂಬಿಕೆ.

ವ್ಯಾಪಾರಕ್ಕೆ ಸಂಬಂಧಿಸಿದಂತೆ ಅನೇಕ ಮೂಢನಂಬಿಕೆಗಳು ಪ್ರಚಲಿತವಿದೆ. ಅಂಗಡಿ ತೆರೆದೊಡನೆ "ಸಾಲ" ಕೇಳಿದರೆ "ಬೋಣಿ" ಆಗಿಲ್ಲ ಎಂದು ಹೇಳಿ ನಗದು ಪಡೆಯುವ ಮೂಲಕವೇ ವಹಿವಾಟು ಆರಂಭಿಸುವುದು. ಕೆಲವು ಅಂಗಡಿಗಳಲ್ಲಿ ಬೆಳಗ್ಗೆ ಪ್ರಥಮ ವ್ಯಾಪಾರ ಕುದುರಿದಾಗ ಗ್ರಾಹಕ ಕೊಟ್ಟ ಹಣವನ್ನು ಅಂಗಡಿ ಮಾಲಕ ತನ್ನ ಕಣ್ಣಿನ ತನಕ ಎತ್ತಿ ಹಿಡಿದು ಧ್ಯಾನ ಮಾಡಿ ಅನಂತರ ಡ್ರಾಯರೊಳಗೆ ಇಡುವುದನ್ನೂ ಕಾಣಬಹುದು.

ಹೊಸ ಕಾರನ್ನು ಕೊಂಡಾಗ ಅನೇಕ ಮಂದಿ ಮೊದಲು ಯಾವುದಾದರೂ ದರ್ಗಾಕ್ಕೆ ಹೊತ್ತು ಕಸ ಗುಡಿಸುವುದು, ಒಡೆದ ಕನ್ನಡಿಯನ್ನು ಬಳಸುವುದು ಮುಂತಾದವುಗಳಿಂದ ಬಡತನ ಬರುತ್ತದೆ ಎಂಬ ಮೂಢನಂಬಿಕೆ ವ್ಯಾಪಕವಾಗಿದೆ. ಇತ್ತೀಚೆಗೆ ಖಬೂರಿ ಪತ್ರಿಕೆಯೊಂದು ಇದರ ದೊಡ್ಡ ಪಟ್ಟಿಯೊಂದನ್ನು ಪ್ರಕಟಿಸಿತ್ತು.

ದೆವ್ವ, ಪ್ರೇತ, ಭೂತ ಮುಂತಾದ ಸಾಂಕಲ್ಪಿತ ಭಯಗಳಿಂದಲೇ ಅನೇಕರು ತಮ್ಮ ಬದುಕನ್ನು ಹಾಳು ಮಾಡಿಕೊಳ್ಳುತ್ತಾರೆ. ಸಾಮಾನ್ಯವಾಗಿ ಪ್ರಕೃತಿ ಸಹಜವಾದ ಅನೇಕ ಘಟನೆಗಳನ್ನು ಭಯಾನಕ ವಿಪತ್ತಾಗಿ ಪರಿಗಣಿಸಿ ಬಾಬಾ, ಬೀವಿ, ತಂಙಳ್, ಜ್ಯೋತಿಷಿಗಳ ಹತ್ತಿರ ಪರಿಹಾರಕ್ಕಾಗಿ ಹೋಗಿ ಕೈ ಸುಟ್ಟುಕೊಳ್ಳುವ ಅನೇಕ ಜನರಿದ್ದಾರೆ. ಇದಕ್ಕೊಂದು ಉದಾಹರಣೆ ಎಂಬಂತೆ ಕೆಲವು ದಿನಗಳ ಹಿಂದೆ ನಮ್ಮ ದ.ಕ. ಜಿಲ್ಲೆಯಲ್ಲೇ ನಡೆದ ವಿದ್ಯಮಾನವೊಂದನ್ನು ಸ್ಥಳೀಯ ಉದಯವಾಣಿ ಪತ್ರಿಕೆ ವರದಿಯಾಗಿ ಪ್ರಕಟಿಸಿದ್ದು ಅದರ ಯಥಾ ರೂಪವನ್ನು ಇಲ್ಲಿ ಕೊಡಲಾಗಿದೆ.

✍ ಅಶ್ರಫ್

# ಅಧ್ಯಾಯ - 3 ಆಲ್ ಇಮ್ರಾನ್

**ಒಟ್ಟು ಸೂಕ್ತಗಳು: 200** — **ಮುಹಮ್ಮದ್ ಅಮಾನಿ ಮೌಲವಿ** — **ಪ್ರಕಟಿತ ಸೂಕ್ತಗಳು: 169, 170, 171, 172, 173**

169 وَلَا تَحْسَبَنَّ الَّذِينَ قُتِلُوا فِي سَبِيلِ اللَّهِ أَمْوَاتًا ۚ بَلْ أَحْيَاءٌ عِنْدَ رَبِّهِمْ يُرْزَقُونَ ﴿١٦٩﴾

170 فَرِحِينَ بِمَا آتَاهُمُ اللَّهُ مِنْ فَضْلِهِ وَيَسْتَبْشِرُونَ بِالَّذِينَ لَمْ يَلْحَقُوا بِهِمْ مِنْ خَلْفِهِمْ أَلَّا خَوْفٌ عَلَيْهِمْ وَلَا هُمْ يَحْزَنُونَ ﴿١٧٠﴾

171 يَسْتَبْشِرُونَ بِنِعْمَةٍ مِنَ اللَّهِ وَفَضْلٍ وَأَنَّ اللَّهَ لَا يُضِيعُ أَجْرَ الْمُؤْمِنِينَ ﴿١٧١﴾

172 الَّذِينَ اسْتَجَابُوا لِلَّهِ وَالرَّسُولِ مِنْ بَعْدِ مَا أَصَابَهُمُ الْقَرْحُ ۚ لِلَّذِينَ أَحْسَنُوا مِنْهُمْ وَاتَّقَوْا أَجْرٌ عَظِيمٌ ﴿١٧٢﴾

173 الَّذِينَ قَالَ لَهُمُ النَّاسُ إِنَّ النَّاسَ قَدْ جَمَعُوا لَكُمْ فَاخْشَوْهُمْ فَزَادَهُمْ إِيمَانًا وَقَالُوا حَسْبُنَا اللَّهُ وَنِعْمَ الْوَكِيلُ ﴿١٧٣﴾

**169**

| | | | | |
|---|---|---|---|---|
| ಆದರೆ ಜೀವಿಸುವವರಾಗಿದ್ದಾರೆ بَلْ أَحْيَاءٌ | ಮರಣ ಹೊಂದಿದವರೆಂದು أَمْوَاتًا | ಅಲ್ಲಾಹನ ಮಾರ್ಗದಲ್ಲಿ فِي سَبِيلِ اللَّهِ | ವಧಿಸಲ್ಪಟ್ಟವರನ್ನು الَّذِينَ قُتِلُوا | ನೀವು ಖಂಡಿತ ಪರಿಗಣಿಸಬೇಡಿರಿ وَلَا تَحْسَبَنَّ |
| | | | ಅವರಿಗೆ ಜೀವನಾಧಾರ ನೀಡಲಾಗುತ್ತಿದೆ يُرْزَقُونَ | ತಮ್ಮ ಪ್ರಭುವಿನ ಬಳಿ عِنْدَ رَبِّهِمْ |

**170**

| | | | | |
|---|---|---|---|---|
| ಮತ್ತು ಅವರು ಅತ್ಯಾನಂದ ಹೊಂದುವರು وَيَسْتَبْشِرُونَ | ಅವನ ಅನುಗ್ರಹದಿಂದ مِنْ فَضْلِهِ | ಅಲ್ಲಾಹು اللَّهُ | ಅವರಿಗೆ ನೀಡಿರುವುದರಲ್ಲಿ بِمَا آتَاهُمُ | ಸಂತುಷ್ಟರಾಗಿರುವರು فَرِحِينَ |
| ಅವರ ಮೇಲೆ عَلَيْهِمْ | ಯಾವ ಭಯವೂ ಇಲ್ಲವೆಂದು أَلَّا خَوْفٌ | ಅವರ ನಂತರದವರ ಪೈಕಿ مِنْ خَلْفِهِمْ | ಅವರೊಂದಿಗೆ بِهِمْ | (ಬಂದು) ಸೇರದವರ ಬಗ್ಗೆ بِالَّذِينَ لَمْ يَلْحَقُوا |
| | | | ವ್ಯಥೆಪಡುವುದು يَحْزَنُونَ | ಮತ್ತು ಅವರಿಲ್ಲ ಎಂದು وَلَا هُمْ |

**171**

| | | | | |
|---|---|---|---|---|
| ಮತ್ತು ಅಲ್ಲಾಹು ಎಂದು وَأَنَّ اللَّهَ | ಮತ್ತು ಔದಾರ್ಯ وَفَضْلٍ | ಅಲ್ಲಾಹನ مِنَ اللَّهِ | ಒಂದು (ಮಹತ್ತರ) ಅನುಗ್ರಹದಿಂದ بِنِعْمَةٍ | ಅವರು ಸಂತೋಷ ಪಡೆಯುವರು يَسْتَبْشِرُونَ |
| | | ಸತ್ಯವಿಶ್ವಾಸಿಗಳ الْمُؤْمِنِينَ | ಪ್ರತಿಫಲವನ್ನು أَجْرَ | ವ್ಯರ್ಥಗೊಳಿಸಲಾರ (ಎಂದು) لَا يُضِيعُ |

**172**

| | | | | | | |
|---|---|---|---|---|---|---|
| ಗಾಯ الْقَرْحُ | ಅವರಿಗೆ ಬಾಧಿಸಿದ مَا أَصَابَهُمُ | ಬಳಿಕ مِنْ بَعْدِ | ಮತ್ತು ಸಂದೇಶವಾಹಕರಿಗೆ وَالرَّسُولِ | ಅಲ್ಲಾಹನಿಗೆ لِلَّهِ | ಅವರು ಉತ್ತರಿಸಿದರು اسْتَجَابُوا | ಯಾರು الَّذِينَ |
| | ಮಹತ್ತರವಾದ عَظِيمٌ | ಪ್ರತಿಫಲ أَجْرٌ | ಮತ್ತು ದೇವ ಭಯವಿರಿಸಿದರು وَاتَّقَوْا | ಅವರ ಪೈಕಿ مِنْهُمْ | ಒಳಿತನ್ನು ಮಾಡಿದರು أَحْسَنُوا | ಯಾರಿಗಿದೆ لِلَّذِينَ |

**173**

| | | | | | | |
|---|---|---|---|---|---|---|
| ಆದುದರಿಂದ ಅವರನ್ನು ಭಯಪಡಿರಿ فَاخْشَوْهُمْ | ನಿಮಗೆ لَكُمْ | ಅವರು ಜಮಾಯಿಸಿದ್ದಾರೆ قَدْ جَمَعُوا | ನಿಜವಾಗಿಯೂ ಜನರು إِنَّ النَّاسَ | ಜನರು النَّاسُ | ಅವರೊಡನೆ ಹೇಳಲಾಯಿತು قَالَ لَهُمُ | ಯಾರು الَّذِينَ |
| ಮತ್ತು ಅವನು ಎಷ್ಟೋ ಉತ್ತಮನು وَنِعْمَ | ಅಲ್ಲಾಹು اللَّهُ | ನಮಗೆ ಸಾಕು حَسْبُنَا | ಮತ್ತು ಅವರು ಹೇಳಿದರು وَقَالُوا | ಸತ್ಯವಿಶ್ವಾಸವನ್ನು إِيمَانًا | ಆಗ ಅದು ಅವರಿಗೆ ವೃದ್ಧಿಸಿತು فَزَادَهُمْ | |
| | | | | | | ಭರವಸೆಯಿಡಲ್ಪಡುವವನು الْوَكِيلُ |

169. ಅಲ್ಲಾಹನ ಮಾರ್ಗದಲ್ಲಿ ವಧಿಸಲ್ಪಟ್ಟವರನ್ನು ನೀವು ಮರಣ ಹೊಂದಿದವರೆಂದು ಖಂಡಿತ ಪರಿಗಣಿಸ ಬೇಡಿರಿ. ಆದರೆ (ಅವರು) ತಮ್ಮ ಪ್ರಭುವಿನ ಬಳಿ ಜೀವಿಸಿರುವವರಾಗಿದ್ದಾರೆ. ಅವರಿಗೆ ಜೀವನಾಧಾರ ನೀಡಲಾಗುತ್ತಿದೆ.

170. ಅಲ್ಲಾಹನ ಅನುಗ್ರಹದ ಶುಭ ವಾರ್ತೆಯಿಂದ ಅವರು ಸಂತುಷ್ಟರಾಗಿರುವರು ಮತ್ತು ತಮ್ಮ ಹಿಂದೆ ಇರುವ(ವವರ) ಪೈಕಿ ತಮ್ಮೊಂದಿಗೆ (ಇನ್ನೂ ಬಂದು) ಸೇರಿರದವರ ಕುರಿತು ಅವರಿಗೆ ಯಾವುದೇ ಭಯವಿಲ್ಲ, ಅವರು ವ್ಯಥೆ ಪಡುವುದೂ ಇಲ್ಲ ಎಂದು (ತಿಳಿದು) ಅವರು (ಹುತಾತ್ಮರು) ಅತ್ಯಾನಂದದಲ್ಲಿದ್ದಾರೆ.

171. ಅಲ್ಲಾಹನ ವತಿಯ ಅನುಗ್ರಹ ಹಾಗೂ ಔದಾರ್ಯದಿಂದ ಅವರು ಸಂತೋಷ ಪಡೆಯುತ್ತಿರುವರು ಮತ್ತು ಅಲ್ಲಾಹು ಸತ್ಯವಿಶ್ವಾಸಿಗಳ ಪ್ರತಿಫಲವನ್ನು ವ್ಯರ್ಥಗೊಳಿಸುವುದಿಲ್ಲ ಎಂಬುದೂ (ಅವರನ್ನು ತೃಪ್ತರನ್ನಾಗಿ ಮಾಡಿದೆ).

172. ತಮಗೆ ಗಾಯಗಳಾದ ಮೇಲೂ ಅಲ್ಲಾಹು ಮತ್ತು ಸಂದೇಶವಾಹಕರ ಕರೆಗೆ ಉತ್ತರಿಸಿ ಒಳಿತನ್ನು ಗೈದವರಿಗೆ ಮತ್ತು ದೇವಭಯವುಳ್ಳವರಿಗೆ ಮಹತ್ತರ ಪ್ರತಿಫಲ ಕಾದಿದೆ.

173. "ನಿಶ್ಚಯವಾಗಿಯೂ ನಿಮ್ಮೊಂದಿಗೆ (ಹೋರಾಡಲು)ಅವರು (ಜನರನ್ನು)ಜಮಾಯಿಸಿದ್ದಾರೆ. ಆದುದರಿಂದ ನೀವು ಅವರನ್ನು ಭಯಪಡಿರಿ" ಎಂದು ಜನರು ಹೇಳಿದಾಗ ಅದು ಅವರಿಗೆ ಸತ್ಯವಿಶ್ವಾಸ ವೃದ್ಧಿಸುವಂತೆ ಮಾಡಿತು. ಅವರು ಹೇಳಿದರು: "ನಮಗೆ ಅಲ್ಲಾಹು ಸಾಕು ಮತ್ತು ಭರವಸೆಯಿಡಲು ಅವನು ಎಷ್ಟೋ ಉತ್ತಮನು."

Name & Address:

**PAVITHRA SANDESHA**
*Kannada Fortnightly*
Polymer House, 2nd Floor, Nellikai Road, Mangalore - 575 001

Regd. With RNI No.: 63987/96
Postal Regd. No. KA/SK/MNG/160/2015-2017
Licenced to Post without prepayment Licence No.
WPP/SK/MNG-104/2015-2017
Posted at Head Post Office, Mangalore.
Posting Date: 13th & 28th of Every Month
Publication Date: 10th & 25th Every Month

## ಸಜ್ಜನರು ಮತ್ತು ದುರ್ಜನರ ಸಹವಾಸ



( مَثَلُ الْجَلِيْسِ الصَّالِحِ وَالسُّوْءِ كَحَامِلِ الْمِسْكِ وَنَافِخِ الْكِيْرِ ، فَحَامِلُ الْمِسْكِ إِمَّا أَنْ يُحْذِيَكَ ، وَإِمَّا أَنْ تَبْتَاعَ مِنْهُ ، وَإِمَّا أَنْ تَجِدَ مِنْهُ رِيْحًا طَيِّبَةً ، وَنَافِخُ الْكِيْرِ إِمَّا أَنْ يُحْرِقَ ثِيَابَكَ ، وَإِمَّا أَنْ تَجِدَ رِيْحًا خَبِيْثَةً )

ಪ್ರವಾದಿ(ಸ)ರವರು ಹೇಳಿದ್ದಾರೆ:

"ಸಜ್ಜನರ ಮತ್ತು ದುರ್ಜನರ ಸಹವಾಸವು ಸುಗಂಧ ದ್ರವ್ಯ ವ್ಯಾಪಾರಿ ಮತ್ತು ಕಬ್ಬಿಣ ಕಾಯಿಸುವ ಕಮ್ಮಾರನ ಉದಾಹರಣೆಯಂತಿದೆ.

ಸುಗಂಧ ದ್ರವ್ಯ ವ್ಯಾಪಾರಿಯ ಬಳಿಗೆ ಹೋದರೆ ಅವನು ಬಟ್ಟೆಗೆ ಉಚಿತವಾಗಿ ಸುಗಂಧ ಪೂಸುತ್ತಾನೆ ಅಥವಾ ಅವನ ಬಳಿ ಕನಿಷ್ಟ ಪಕ್ಷ ಅತ್ತರಿನ ಸುವಾಸನೆಯನ್ನಾದರೂ ಆಸ್ವಾದಿಸಬಹುದು.

ಕಬ್ಬಿಣದ ಕೆಲಸದವನ ಬಳಿಗೆ ಹೋದರೆ ಬೆಂಕಿಯ ಕಿಡಿ ಹಾರಿ ಅಂಗಿ ತೂತಾಗಬಹುದು ಅಥವಾ ಕನಿಷ್ಟ ಪಕ್ಷ ಅದರ ದುರ್ವಾಸನೆಯಿಂದ ಅಸಹ್ಯವಾಗಬಹುದು" (ಬುಖಾರಿ).

"ಕೆಟ್ಟವರ ಸಂಘ ಅಭಿಮಾನ ಭಂಗ" ಎಂಬ ಗಾದೆ ಮಾತಿನಂತೆ ಕೆಟ್ಟವರನ್ನು ಮಿತ್ರರನ್ನಾಗಿ ಮಾಡಿದರೆ ಕಮ್ಮಾರನ ಬಳಿ ಹೋದಂತೆ. ಕೆಟ್ಟವನ ದುಷ್ಟ ಚಾಳಿ, ದುಃಸ್ವಭಾವ ನಮಗೂ ಅಂಟುತ್ತದೆ ಮತ್ತು ಒಳ್ಳೆಯ ಮಿತ್ರನಾದರೆ ಅವನ ನಮಾಝ್ ಹಾಗೂ ಸದ್ಬುದ್ಧಿ ಒಳ್ಳೆಯ ಕಾರ್ಯಗಳಿಗೆ ನಮ್ಮನ್ನು ಪ್ರೇರೇಪಿಸುತ್ತದೆ ಎಂದು ಪ್ರವಾದಿ(ಸ)ರವರು ಅತ್ತರ್ ವ್ಯಾಪಾರಿ ಮತ್ತು ಕಬ್ಬಿಣದ ಕೆಲಸಗಾರನ ಉದಾಹರಣೆಯನ್ನು ಕೊಟ್ಟು, ಮನ ಮುಟ್ಟುವಂತೆ ವಿವರಿಸಿದ್ದಾರೆ.

## ಬಾಕಿ ಉಳಿಯುವುದು ಸತ್ಕರ್ಮ ಮಾತ್ರ



(يَتْبَعُ الْمَيِّتَ ثَلَاثَةٌ : أَهْلُهُ وَعَمَلُهُ وَمَالُهُ فَيَرْجِعُ اثْنَانِ وَيَبْقَى وَاحِدٌ ، يَرْجِعُ أَهْلُهُ وَمَالُهُ ، وَيَبْقَى عَمَلُهُ )

ಮೂರು ವಸ್ತುಗಳು ಮೃತ ದೇಹವನ್ನು ಹಿಂಬಾಲಿಸುತ್ತದೆ. ಸಂತಾನ, ಅವನು ಮಾಡಿದ ಕರ್ಮಗಳು ಮತ್ತು ಸಂಪತ್ತು. ದಫನದ ನಂತರ ಸಂತಾನ ಮತ್ತು ಸಂಪತ್ತು ಹಿಂದಿರುಗುತ್ತವೆ. ಅವನು ಮಾಡಿದ ಕರ್ಮ ಮಾತ್ರ ಬಾಕಿ ಉಳಿಯುತ್ತದೆ (ಬುಖಾರಿ, ಮುಸ್ಲಿಮ್)

ಸಂಪತ್ತು, ಸಂತಾನಗಳ ಹಿಂದೆ ರಾತ್ರಿ ಹಗಲೆನ್ನದೆ ಓಡಾಡುವವರು ತಮ್ಮ ಪರಲೋಕ ಜೀವನದಲ್ಲಿ ಅವುಗಳು ಯಾವುದೇ ಉಪಕಾರಕ್ಕಿರದು ಎಂದು ತಿಳಿಯಬೇಕು. ತಾವು ಮಾಡಿರುವ ಸತ್ಕರ್ಮಗಳು ಮಾತ್ರ ಬಾಕಿ ಉಳಿಯುವಂತಹದ್ದೆಂದು ತಿಳಿದು ಸಾಕಷ್ಟು ಸತ್ಕರ್ಮಗಳನ್ನು ಮಾಡಬೇಕಾಗಿದೆ.



## ಲಾಭ ಪಡೆಯುವವರು ಯಾರಿದ್ದಾರೆ?

( مَنْ سَرَّهُ أَنْ يُمَدَّ لَهُ فِى عُمُرِهِ ، وَيُزَادَ فِى رِزْقِهِ فَلْيَبَرَّ وَالِدَيْهِ وَلْيَصِلْ رَحِمَهُ )





ಪ್ರವಾದಿ(ಸ)ರವರು ಹೇಳಿದ್ದಾರೆ:

"ತನ್ನ ಆಯುಷ್ಯ ವೃದ್ಧಿಯಾಗಬೇಕು. ಆಹಾರದಲ್ಲಿ ಸಮೃದ್ಧಿ ಉಂಟಾಗಬೇಕು ಎಂದು ಬಯಸುವವನು ಮಾತಾಪಿತರೊಂದಿಗೆ ಸೌಜನ್ಯದಿಂದ ವರ್ತಿಸಲಿ ಮತ್ತು ಕುಟುಂಬ ಸಂಬಂಧವನ್ನು ಜೋಡಿಸಲಿ" (ಅಹ್ಮದ್).

ವೃದ್ಧ ಮಾತಾಪಿತರು ಮಕ್ಕಳಿಗೆ ಭಾರವಾಗಿ ವೃದ್ಧಾಶ್ರಮಕ್ಕೆ ದಾಖಲಿಸಲ್ಪಡುವ ಮತ್ತು ಕುಟುಂಬ ಸಂಬಂಧ ಶಿಥಿಲಗೊಳ್ಳುತ್ತಿರುವ ಕಾಲದಲ್ಲಿ ನಾವು ಜೀವಿಸುತ್ತಿದ್ದೇವೆ.

ಪ್ರವಾದಿ(ಸ)ರವರು ಹೇಳಿರುವ ಎರಡು ವಿಷಯಗಳನ್ನು ಚಿಂತಿಸಿ ಲಾಭ ಪಡೆಯುವವರು ಯಾರಿದ್ದಾರೆ?

## ಅಲ್ಲಾಹು ನೀಡಿದ ಅನುಗ್ರಹಗಳನ್ನು ಅರಿಯಿರಿ...!

(أُنْظُرُوْا إِلَىٰ مَنْ هُوَ أَسْفَلَ مِنْكُمْ ، وَلَا تَنْظُرُوْا إِلَىٰ مَنْ هُوَ فَوْقَكُمْ فَإِنَّهُ أَجْدَرُ أَنْ لَا تَزْدَرُوْا نِعْمَةَ اللّٰهِ)



ಪ್ರವಾದಿ(ಸ)ರು ಹೇಳಿದ್ದಾರೆ:

"(ಆರೋಗ್ಯ ಮತ್ತು ಸಂಪತ್ತುಗಳಲ್ಲಿ) ನಿಮಗಿಂತ ಕೆಳ ಸ್ತರದಲ್ಲಿರುವವರನ್ನು ನೋಡಿರಿ. ನಿಮಗಿಂತ ಮೇಲಿನವರನ್ನು ನೋಡದಿರಿ. ಆಗ ನಿಮಗೆ ಅಲ್ಲಾಹು ನೀಡಿದ ಐಶ್ವರ್ಯದ ಅನುಭವವಾಗುವುದು (ಮುಸ್ಲಿಮ್).

ಮಾನವನು ತನ್ನಲ್ಲಿದ್ದ ಅನುಗ್ರಹ, ಐಶ್ವರ್ಯದ ಕಡೆಗೆ ನೋಡದೆ ಇತರರಲ್ಲಿರುವುದನ್ನು ನೋಡಿ ತನ್ನಲ್ಲಿಲ್ಲವಲ್ಲಾ ಎಂದು ಕೊರಗುತ್ತಾನೆ. ಸಾಮಾನ್ಯ ರೋಗ ಭಾದಿಸಿದವನು ತನಗಿಂತ ಮಿಗಿಲಾದ ಮಾರಕ ರೋಗಕ್ಕೆ ತುತ್ತಾದವರನ್ನು ನೋಡಬೇಕಲ್ಲದೆ ಆರೋಗ್ಯವಂತ ರನ್ನು ನೋಡಬಾರದು. ಸಾಮಾನ್ಯ ಮನೆ ಯಲ್ಲಿ ವಾಸಿಸುವವನೊಬ್ಬನು ಅರಮನೆ ಯಲ್ಲಿ ವಾಸಿಸುವವರನ್ನು ನೋಡದೆ ರಸ್ತೆ ಬದಿಯ ಗುಡಿಸಲಿನಲ್ಲಿ ವಾಸಿಸುವವರನ್ನು ನೋಡಿದರೆ! ದ್ವಿಚಕ್ರ ವಾಹನದಲ್ಲಿ ಸವಾರಿ ಮಾಡುವವನು ಕಾರಲ್ಲಿ ಹೋಗುವವನನ್ನು ನೋಡಿ ಕೊರಗುವುದಕ್ಕಿಂತ ಕಾಲ್ನಡಿಗೆಯಲ್ಲಿ ಹೋಗುವವರ ಕಡೆಗೆ ನೋಡಿದರೆ ತನಗೆ ಅಲ್ಲಾಹು ನೀಡಿದ ಅನುಗ್ರಹದ ಅನುಭವವಾಗುವುದು ಎಂದು ಮೇಲಿನ ಹದೀಸ್‌ನಿಂದ ತಿಳಿದು ಬರುತ್ತದೆ.

Printed, Published & Owned by RIYAZ AHMED on behalf of SATHYA PRAKASHANA PUBLICATION TRUST MANGALORE, Printed at Digantha Mudrana Ltd., Yeyyadi, Mangalore, D.K. Published at 20-2-155/1, 2nd Floor, Polymer House Bldg., Nellikai Road, Mangalore - 575 001, D.K. Editor: M.G. Muhammad